| ಕ್ರ. ಸಂ. | ಜಿಲ್ಲೆಯ ಹೆಸರು | ಕ್ರ. ಸಂ. | ಶಾಲೆಗಳ ವಿಳಾಸ | ಕೊಠಡಿಗಳ ಸಂಖ್ಯೆ | ಅನುದಾನ ಹಂಚಿಕೆ (ರೂ.ಲಕ್ಷಗಳಲ್ಲಿ) |
|---|---|---|---|---|---|
| 26 | ಚಿಕ್ಕೋಡಿ | 70 | ಸ.ಪ್ರೌ. ಶಾಲೆ, ರಾಯಬಾಗ್ | 2 | 9.98 |
| | | 71 | ಸ.ಪ್ರೌ. ಶಾಲೆ, ಉರ್ದು, ಹುಕ್ಕೇರಿ | 2 | 9.98 |
| | | 72 | ಸ.ಪ್ರೌ. ಶಾಲೆ, ಮೂಡಲಗಿ, ಗೋಕಾಕ್ | 2 | 9.98 |
| 27 | ಉತ್ತರ ಕನ್ನಡ | 73 | ಮಾರಿಕಾಂಬ ಸ.ಪ.ಪೂ.ಕಾ. (ಪ್ರೌಢಶಾಲಾ ವಿಭಾಗ) | 3 | 14.98 |
| | | 74 | ಸರ್ಕಾರಿ ಪ್ರೌಢ ಶಾಲೆ, ಕೋಲಸಿರ್ಸಿ | 3 | 14.98 |
| | | 75 | ಸರ್ಕಾರಿ ಪ್ರೌಢಶಾಲೆ, ಹಳ್ಳದಕಟ್ಟೆ, ಸಿದ್ದಾಪುರ ತಾಲ್ಲೂಕು | 2 | 9.98 |
| | | | **ಒಟ್ಟು** | **153** | **763.79** |

**ಐ.ಎಫ್. ಮಾಗಿ**

ಪಿ.ಆರ್.587

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ)

## ಕೃಷಿ ಸಚಿವಾಲಯ

**ವಿಷಯ :** ಶ್ರೀ ಈ ಈರದಾಸಪ್ಪ, ಸಹಾಯಕ ಕೃಷಿ ನಿರ್ದೇಶಕರು, ಇವರು ಸ್ವಇಚ್ಛಾ ನಿವೃತ್ತಿ ಹೊಂದಲು ಅನುಮತಿ.

**ಓದಲಾಗಿದೆ:** 1. ಕೃಷಿ ಆಯುಕ್ತರ ಪತ್ರ ಸಂ: ಕೃಸಿಪ(1)132/2007–08, ದಿನಾಂಕ 16–6–2008.
2. ಶ್ರೀ ಈ. ಈರದಾಸಪ್ಪ, ಇವರ ಮನವಿ ದಿನಾಂಕ 17–11–2008.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಕೃಷಿ ಆಯುಕ್ತರ ಪ್ರಸ್ತಾವನೆಯಲ್ಲಿ ಶ್ರೀ ಈ. ಈರದಾಸಪ್ಪ, ಸಹಾಯಕ ಕೃಷಿ ನಿರ್ದೇಶಕರು, ವೈಯಕ್ತಿಕ ಕಾರಣಗಳನ್ನು ಉಲ್ಲೇಖಿಸಿ ದಿನಾಂಕ 25–2–2008 ರಿಂದ ಜಾರಿಗೆ ಬರುವಂತೆ ಸ್ವಇಚ್ಛಾ ನಿವೃತ್ತಿ ಕೋರಿ ಸಲ್ಲಿಸಿರುವ ದಿನಾಂಕ 25–2–2008ರ ಮನವಿಯನ್ನು ಲಗತ್ತಿಸುತ್ತಾ, ಸದರಿ ಅಧಿಕಾರಿಯು ತಮ್ಮ ಪ್ರಭಾರವನ್ನು ಶ್ರೀ ಶಿವನಗೌಡ ಪಾಟೀಲ್ ಇವರಿಗೆ ಹಸ್ತಾಂತರಿಸಿರುತ್ತಾರೆ ಎಂದು ತಿಳಿಸಿ ಈ ಬಗ್ಗೆ ಸೂಕ್ತ ಕ್ರಮ ತೆಗೆದುಕೊಂಡು ಸದರಿಯವರ ರಾಜೀನಾಮೆ ಅಂಗೀಕಾರದ ಬಗ್ಗೆ ಆದೇಶ ಹೊರಡಿಸುವಂತೆ ಕೋರಿದ್ದಾರೆ. ಕ್ರ.ಸಂ. (2)ರಲ್ಲಿ ಓದಲಾದ ಸದರಿ ಅಧಿಕಾರಿಯ ಮನವಿಯಲ್ಲಿ ತಮ್ಮ ರಾಜೀನಾಮೆ ದಿನಾಂಕ 25–2–2008 ರಿಂದ ಪೂರ್ವಾನ್ವಯವಾಗಿ ಅಂಗೀಕರಿಸಿದಾಗ್ಯೂ ಸಹ ತಮ್ಮ ಸರ್ಕಾರಿ ಸೇವಾ ಅವಧಿಯಲ್ಲಿ ತಮ್ಮ ವೈಯಕ್ತಿಕ ಹೆಸರಿನಲ್ಲಿ ಮುಂದಿನ ಲೆಕ್ಕ ತಪಾಸಣೆಗಳಲ್ಲಿ ಉದ್ಭವಿಸಿ ನಿರ್ಧರಿಸಲಾಗುವ ಸರ್ಕಾರದ ಬಾಕಿಗಳೇನಾದರೂ ಬಂದಲ್ಲಿ ಕಟ್ಟಿಕೊಡಲು ಸಿದ್ದವಿರುವುದಾಗಿ ಪ್ರಮಾಣೀಕರಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 188 ಕೃಪಸೇ 2008, ಬೆಂಗಳೂರು, ದಿನಾಂಕ: 22ನೇ ಜನವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ಈರದಾಸಪ್ಪ, ಸಹಾಯಕ ಕೃಷಿ ನಿರ್ದೇಶಕರು, ತುಂಗಭದ್ರ ಕೃಷಿ ಅಭಿವೃದ್ಧಿ ಕೇಂದ್ರ, ದಡೆಸುಗೂರು, ರಾಯಚೂರು ಜಿಲ್ಲೆ ಇವರು ತಮ್ಮ ಹುದ್ದೆಗೆ ನೀಡಿರುವ ರಾಜೀನಾಮೆಯನ್ನು ದಿನಾಂಕ 25–2–2008 ರಿಂದ ಜಾರಿಗೆ ಬರುವಂತೆ ಅಂಗೀಕರಿಸಿ, ಕೃಷಿ ಇಲಾಖೆಯಲ್ಲಿ ಇವರು ಹೊಂದಿದ್ದ ಸಹಾಯಕ ಕೃಷಿ ನಿರ್ದೇಶಕರ ಹುದ್ದೆಯ ಸೇವೆಯಿಂದ ದಿನಾಂಕ 25–2–2008 ರಿಂದ ಜಾರಿಗೆ ಬರುವಂತೆ ಬಿಡುಗಡೆಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 498

**ಜಿ.ಕೆ. ಗುರಾಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಇಲಾಖೆ

## ಶಿಕ್ಷಣ ಸಚಿವಾಲಯ

**ವಿಷಯ :** 2008–09ನೇ ಸಾಲಿಗೆ ಯೋಜನೇತರದಡಿ ರಾಜ್ಯದ ಎಲ್ಲಾ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ದುರಸ್ತಿಗಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ: ಯೋ(8) ಪ್ರಾಶಾಕದು (ಯೋಜನೇತರ)/2008–09/ದಿನಾಂಕ 3–6–2008.

**ಪ್ರಸ್ತಾವನೆ :**

(1) ಮೇಲೆ ಓದಲಾದ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರದಲ್ಲಿ ರಾಜ್ಯದ ಎಲ್ಲಾ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ದುರಸ್ತಿಗಾಗಿ 2008–09ನೇ ಸಾಲಿಗೆ ಲೆಕ್ಕಶೀರ್ಷಿಕೆ 2202–01–053–0–01–200 (ಯೋಜನೇತರ) (ನಿರ್ವಹಣೆ) ಯಡಿ ಒದಗಿಸಲಾಗಿರುವ 1124.86 ಲಕ್ಷ ರೂ.ಗಳನ್ನು ಬಿಡುಗಡೆ ಮಾಡುವಂತೆ ಪ್ರಸ್ತಾವನೆಯನ್ನು ಸಲ್ಲಿಸಿ ಅನುದಾನ ಬಿಡುಗಡೆಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

(2) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 204 ಯೋಯೋಕ 2008, ಬೆಂಗಳೂರು, ದಿನಾಂಕ: 9ನೇ ಫೆಬ್ರವರಿ 2009.**
**(ಇಡಿ 15 ಸ್ವೀಮರ (ಯುನಿಕ್) 2009, ದಿನಾಂಕ 9–2–2009)**

(3) ರಾಜ್ಯದ ಎಲ್ಲಾ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ದುರಸ್ತಿಗಾಗಿ 2008–09ನೇ ಸಾಲಿಗೆ ಲೆಕ್ಕಶೀರ್ಷಿಕೆ 2202–01–053–0–01–200 (ಯೋಜನೇತರ) (ನಿರ್ವಹಣೆ) ಯಡಿ ಒದಗಿಸಲಾಗಿರುವ 1124.86 ಲಕ್ಷ ರೂ.ಗಳನ್ನು (ಒಂದು ಸಾವಿರದ ಒಂದು ನೂರಾ ಇಪ್ಪತ್ತನಾಲ್ಕು ಲಕ್ಷದ ಎಂಬತ್ತಾರು ಸಾವಿರ ರೂಪಾಯಿಗಳು ಮಾತ್ರ) ಅನುಬಂಧದಲ್ಲಿ ತೋರಿಸಿರುವ ನಗರ, ಗ್ರಾಮಾಂತರ ಪ್ರದೇಶದ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ದುರಸ್ತಿಗಾಗಿ ಅವುಗಳ ಮುಂದೆ ತೋರಿಸಿರುವಂತೆ ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಗೆ ಹಂಚಿಕೆ ಮಾಡಿ ಬಿಡುಗಡೆ ಮಾಡಲಾಗಿದೆ.

(4) ಸದರಿ ಮೊತ್ತವನ್ನು ಡ್ರಾ ಮಾಡುವ ಅಧಿಕಾರವನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ನೀಡಲಾಗಿದೆ.

(5) ಬಿಡುಗಡೆ ಮಾಡುತ್ತಿರುವ ಸದರಿ ಮೊತ್ತವು ಜಿಲ್ಲಾ ಪಂಚಾಯತ್ ಲಿಂಕ್ ಡಾಕ್ಯುಮೆಂಟ್‌ನಿಂದ ಹೊರತುಪಡಿಸಿದೆ.

(6) ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರು ಅನಧಿಕೃತ ಟಿಪ್ಪಣಿ ಸಂಖ್ಯೆ: ಶಿಇ 1007 ಐಎಫ್ (ಬಿಎ) 2008, ದಿನಾಂಕ 29–8–2008ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಎಫ್. ಮಾಗಿ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ)

**ಸರ್ಕಾರಿ ಆದೇಶ ಸಂಖ್ಯೆ: ಇಡಿ 204 ಯೋಯೋಕ 2008, ಬೆಂಗಳೂರು, ದಿನಾಂಕ: 9ನೇ ಫೆಬ್ರವರಿ 2009.**
**(ಇಡಿ 15 ಸ್ವೀಮರ (ಯುನಿಕ್) 2009, ದಿನಾಂಕ 9–2–2009) ಕ್ಕೆ ಅನುಬಂಧ**
**2008–09ನೇ ಸಾಲಿನಲ್ಲಿ ಯೋಜನೇತರಡಿಯಲ್ಲಿ ದುರಸ್ತಿಗಾಗಿ ಬಿಡುಗಡೆ ಮಾಡಲಾದ ಅನುದಾನದ ಜಿಲ್ಲಾವಾರು ಹಂಚಿಕೆ ವಿವರ**
**(ಪ್ರಾಥಮಿಕ+ಪ್ರೌಢ) = ರೂ. 1124.86 ಲಕ್ಷಗಳು. ಲೆಕ್ಕ ಶೀರ್ಷಿಕೆ 2202–01–053–0–01–200**

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಪ್ರಾಥಮಿಕ | | ಪ್ರೌಢ | |
|---|---|---|---|---|---|---|
| | | | ನಗರ | ಗ್ರಾಮೀಣ | ನಗರ | ಗ್ರಾಮೀಣ |
| 1 | ಬೆಂಗಳೂರು ಉತ್ತರ | ಉತ್ತರ ವಲಯ–1 | 1.166 | 1.166 | 0.8 | 0.8 |
| | | ಉತ್ತರ ವಲಯ–2 | 1.166 | 1.166 | 0.8 | 0.8 |
| | | ಉತ್ತರ ವಲಯ–3 | 1.166 | 1.166 | 0.8 | 0.8 |
| | | ಉತ್ತರ ವಲಯ–4 | 1.167 | 1.67 | 0.805 | 0.805 |
| | | | **4.665** | **4.665** | **3.205** | **3.205** |
| 2 | ಬೆಂಗಳೂರು ದಕ್ಷಿಣ | ದಕ್ಷಿಣ ವಲಯ–1 | 1.096 | 1.096 | 1.248 | 1.248 |
| | | ದಕ್ಷಿಣ ವಲಯ–2 | 1.096 | 1.096 | 1.248 | 1.248 |
| | | ದಕ್ಷಿಣ ವಲಯ–3 | 1.096 | 1.096 | 1.248 | 1.248 |
| | | ದಕ್ಷಿಣ ವಲಯ–4 | 1.096 | 1.096 | 1.248 | 1.248 |
| | | ಆನೇಕಲ್ | 1.096 | 1.096 | 1.248 | 1.248 |
| | | | **5.48** | **5.48** | **6.24** | **6.24** |
| 3 | ಬೆಂಗಳೂರು ಗ್ರಾಮಾಂತರ | ನೆಲಮಂಗಲ | 1.732 | 1.732 | 1.192 | 1.192 |
| | | ದೊಡ್ಡಬಳ್ಳಾಪುರ | 1.732 | 1.732 | 1.192 | 1.192 |

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಪ್ರಾಥಮಿಕ | | ಪ್ರೌಢ | |
|---|---|---|---|---|---|---|
| | | ದೇವನಹಳ್ಳಿ | 1.732 | 1.732 | 1.192 | 1.192 |
| | | ಹೊಸಕೋಟೆ | 1.732 | 1.732 | 1.192 | 1.192 |
| | | ಮಾಗಡಿ | 1.732 | 1.732 | 1.192 | 1.192 |
| | | | **8.66** | **8.66** | **5.96** | **5.96** |
| 4 | ರಾಮನಗರ | ರಾಮನಗರ | 3.55 | 3.55 | 2.41 | 2.41 |
| | | ಚನ್ನಪಟ್ಟಣ | 3.55 | 3.55 | 2.41 | 2.41 |
| | | ಕನಕಪುರ | 3.555 | 3.555 | 2.435 | 2.435 |
| | | | **10.655** | **10.655** | **7.255** | **7.255** |
| 5 | ಕೋಲಾರ | ಬಂಗಾರಪೇಟೆ | 1.31 | 1.31 | 2.03 | 2.03 |
| | | ಕೋಲಾರ | 1.31 | 1.31 | 2.03 | 2.03 |
| | | ಕೆ.ಜಿ.ಎಫ್. | 1.31 | 1.31 | 2.03 | 2.03 |
| | | ಮಾಲೂರು | 1.31 | 1.31 | 2.03 | 2.03 |
| | | ಮುಳಬಾಗಿಲು | 1.31 | 1.31 | 2.03 | 2.03 |
| | | ಶ್ರೀನಿವಾಸಪುರ | 1.32 | 1.32 | 2.05 | 2.05 |
| | | | **7.87** | **7.87** | **12.2** | **12.2** |
| 6 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | 1.11 | 1.11 | 1.22 | 1.22 |
| | | ಚಿಕ್ಕಬಳ್ಳಾಪುರ | 1.11 | 1.11 | 1.22 | 1.22 |
| | | ಚಿಂತಾಮಣಿ | 1.11 | 1.11 | 1.22 | 1.22 |
| | | ಗೌರಿಬಿದನೂರು | 1.11 | 1.11 | 1.22 | 1.22 |
| | | ಗುಡಿಬಂಡೆ | 1.11 | 1.11 | 1.22 | 1.22 |
| | | ಶಿಡ್ಲಘಟ್ಟ | 1.11 | 1.11 | 1.265 | 1.265 |
| | | | **6.66** | **6.66** | **7.365** | **7.365** |
| 7 | ತುಮಕೂರು | ತುಮಕೂರು | 1.46 | 1.46 | 2.2 | 2.2 |
| | | ತಿಪಟೂರು | 1.46 | 1.46 | 2.2 | 2.2 |
| | | ಚಿಕ್ಕನಾಯಕನಹಳ್ಳಿ | 1.46 | 1.46 | 2.2 | 2.2 |
| | | ತುರುವೇಕೆರೆ | 1.46 | 1.46 | 2.2 | 2.2 |
| | | ಕುಣಿಗಲ್ | 1.46 | 1.46 | 2.2 | 2.2 |
| | | ಗುಬ್ಬಿ | 1.5 | 1.5 | 2.215 | 2.215 |
| | | | **8.8** | **8.8** | **13.215** | **13.215** |
| 8 | ಮಧುಗಿರಿ | ಮಧುಗಿರಿ | 1.65 | 1.65 | 2.32 | 2.32 |
| | | ಪಾವಗಡ | 1.65 | 1.65 | 2.32 | 2.32 |
| | | ಸಿರಾ | 1.65 | 1.65 | 2.32 | 2.32 |
| | | ಕೊರಟಗೆರೆ | 1.685 | 1.685 | 2.32 | 2.32 |
| | | | **6.635** | **6.635** | **9.28** | **9.28** |
| 9 | ಚಿತ್ರದುರ್ಗ | ಚಿತ್ರದುರ್ಗ | 1.86 | 1.86 | 1.69 | 1.69 |
| | | ಚಳ್ಳಕೆರೆ | 1.86 | 1.86 | 1.69 | 1.69 |
| | | ಹಿರಿಯೂರು | 1.86 | 1.86 | 1.69 | 1.69 |
| | | ಹೊಳಲ್ಕೆರೆ | 1.86 | 1.86 | 1.69 | 1.69 |
| | | ಹೊಸದುರ್ಗ | 1.86 | 1.86 | 1.69 | 1.69 |

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಪ್ರಾಥಮಿಕ | | ಪ್ರೌಢ | |
|---|---|---|---|---|---|---|
| | | ಮೊಳಕಾಲ್ಮೂರು | 1.86 | 1.86 | 1.725 | 1.725 |
| | | | **11.16** | **11.16** | **10.175** | **10.175** |
| 10 | ದಾವಣಗೆರೆ | ಚನ್ನಗಿರಿ | 1.55 | 1.55 | 1.81 | 1.81 |
| | | ದಾವಣಗೆರೆ ಉತ್ತರ | 1.55 | 1.55 | 1.81 | 1.81 |
| | | ದಾವಣಗೆರೆ ದಕ್ಷಿಣ | 1.55 | 1.55 | 1.81 | 1.81 |
| | | ಹರಪ್ಪನಹಳ್ಳಿ | 1.55 | 1.55 | 1.81 | 1.81 |
| | | ಹರಿಹರ | 1.55 | 1.55 | 1.81 | 1.81 |
| | | ಹೊನ್ನಾಳಿ | 1.55 | 1.55 | 1.81 | 1.81 |
| | | ಜಗಳೂರು | 1.55 | 1.55 | 1.85 | 1.85 |
| | | | **10.85** | **10.85** | **12.71** | **12.71** |
| 11 | ಶಿವಮೊಗ್ಗ | ಭದ್ರಾವತಿ | 1.83 | 1.83 | 1.95 | 1.95 |
| | | ಹೊಸನಗರ | 1.83 | 1.83 | 1.95 | 1.95 |
| | | ಸಾಗರ | 1.83 | 1.83 | 1.95 | 1.95 |
| | | ಶಿಕಾರಿಪುರ | 1.83 | 1.83 | 1.95 | 1.95 |
| | | ಶಿವಮೊಗ್ಗ | 1.83 | 1.83 | 1.95 | 1.95 |
| | | ಸೊರಬ | 1.83 | 1.83 | 1.95 | 1.95 |
| | | ತೀರ್ಥಹಳ್ಳಿ | 1.895 | 1.895 | 1.965 | 1.965 |
| | | | **12.875** | **12.875** | **13.665** | **13.665** |
| 12 | ಮೈಸೂರು | ಹೆಗ್ಗಡೆದೇವನಕೋಟೆ | 0.99 | 0.99 | 1.94 | 1.94 |
| | | ಹುಣಸೂರು | 0.99 | 0.99 | 1.94 | 1.94 |
| | | ಕೆ.ಆರ್. ನಗರ | 0.99 | 0.99 | 1.94 | 1.94 |
| | | ಮೈಸೂರು ಉತ್ತರ | 0.99 | 0.99 | 1.94 | 1.94 |
| | | ಮೈಸೂರು ದಕ್ಷಿಣ | 0.99 | 0.99 | 1.94 | 1.94 |
| | | ಮೈಸೂರು ಗ್ರಾಮಾಂತರ | 0.99 | 0.99 | 1.94 | 1.94 |
| | | ನಂಜನಗೂಡು | 0.99 | 0.99 | 1.94 | 1.94 |
| | | ಪರಿಯಾಪಟ್ಟಣ | 0.99 | 0.99 | 1.94 | 1.94 |
| | | ಟಿ. ನರಸೀಪುರ | 0.99 | 0.99 | 1.99 | 1.99 |
| | | | **8.91** | **8.91** | **17.51** | **17.51** |
| 13 | ಚಾಮರಾಜನಗರ | ಚಾಮರಾಜನಗರ | 0.75 | 0.75 | 1.192 | 1.192 |
| | | ಗುಂಡ್ಲುಪೇಟೆ | 0.75 | 0.75 | 1.192 | 1.192 |
| | | ಹನೂರು | 0.75 | 0.75 | 1.192 | 1.192 |
| | | ಕೊಳ್ಳೇಗಾಲ | 0.75 | 0.75 | 1.192 | 1.192 |
| | | ಯಳಂದೂರು | 0.765 | 0.765 | 1.192 | 1.192 |
| | | | **3.765** | **3.765** | **5.96** | **5.96** |
| 14 | ಮಂಡ್ಯ | ಕೃಷ್ಣರಾಜನಗರ | 1.25 | 1.25 | 1.75 | 1.75 |
| | | ಮದ್ದೂರು | 1.25 | 1.25 | 1.75 | 1.75 |
| | | ಮಳವಳ್ಳಿ | 1.25 | 1.25 | 1.75 | 1.75 |
| | | ಮಂಡ್ಯ ಉತ್ತರ | 1.25 | 1.25 | 1.75 | 1.75 |

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಪ್ರಾಥಮಿಕ | | ಪ್ರೌಢ | |
|---|---|---|---|---|---|---|
| | | ಮಂಡ್ಯ ದಕ್ಷಿಣ | 1.25 | 1.25 | 1.75 | 1.75 |
| | | ನಾಗಮಂಗಲ | 1.25 | 1.25 | 1.75 | 1.75 |
| | | ಪಾಂಡವಪುರ | 1.25 | 1.25 | 1.75 | 1.75 |
| | | ಶ್ರೀರಂಗಪಟ್ಟಣ | 1.26 | 1.26 | 1.81 | 1.81 |
| | | | **10.01** | **10.01** | **14.06** | **14.06** |
| 15 | ಹಾಸನ | ಸಕಲೇಶಪುರ | 1.52 | 1.52 | 2.05 | 2.05 |
| | | ಬೇಲೂರು | 1.52 | 1.52 | 2.05 | 2.05 |
| | | ಅರಸೀಕೆರೆ | 1.52 | 1.52 | 2.05 | 2.05 |
| | | ಹಾಸನ | 1.52 | 1.52 | 2.05 | 2.05 |
| | | ಆಲೂರು | 1.52 | 1.52 | 2.05 | 2.05 |
| | | ಅರಕಲಗೂಡು | 1.52 | 1.52 | 2.05 | 2.05 |
| | | ಹೊಳೆನರಸೀಪುರ | 1.52 | 1.52 | 2.05 | 2.05 |
| | | ಚನ್ನರಾಯಪಟ್ಟಣ | 1.595 | 1.595 | 2.125 | 2.125 |
| | | | **12.235** | **12.235** | **16.475** | **16.475** |
| 16 | ಚಿಕ್ಕಮಗಳೂರು | ಚಿಕ್ಕಮಗಳೂರು | 0.88 | 0.88 | 1 | 1 |
| | | ಕಡೂರು | 0.88 | 0.88 | 1 | 1 |
| | | ಕೊಪ್ಪ | 0.88 | 0.88 | 1 | 1 |
| | | ಮೂಡಿಗೆರೆ | 0.88 | 0.88 | 1 | 1 |
| | | ಎನ್.ಆರ್. ಪುರ | 0.88 | 0.88 | 1 | 1 |
| | | ಶೃಂಗೇರಿ | 0.88 | 0.88 | 1 | 1 |
| | | ತರಿಕೇರಿ | 0.88 | 0.88 | 1 | 1 |
| | | ಬೀರೂರು | 0.925 | 0.925 | 1.04 | 1.04 |
| | | | **7.085** | **7.085** | **8.04** | **8.04** |
| 17 | ಕೊಡಗು | ಮಡಿಕೇರಿ | 0.77 | 0.77 | 1.19 | 1.19 |
| | | ಸೋಮವಾರಪೇಟೆ | 0.77 | 0.77 | 1.19 | 1.19 |
| | | ವಿರಾಜಪೇಟೆ | 0.79 | 0.79 | 1.215 | 1.215 |
| | | | **2.33** | **2.33** | **2.595** | **3.595** |
| 18 | ದಕ್ಷಿಣ ಕನ್ನಡ | ಬಂಟ್ವಾಳ | 1.3 | 1.3 | 1.88 | 1.88 |
| | | ಬೆಳ್ತಂಗಡಿ | 1.3 | 1.3 | 1.88 | 1.88 |
| | | ಮಂಗಳೂರು ನಗರ | 1.3 | 1.3 | 1.88 | 1.88 |
| | | ಮಂಗಳೂರು ಗ್ರಾಮಾಂತರ | 1.3 | 1.3 | 1.88 | 1.88 |
| | | ಮೂಡಬಿದ್ರೆ | 1.3 | 1.3 | 1.88 | 1.88 |
| | | ಪುತ್ತೂರು | 1.3 | 1.3 | 1.88 | 1.88 |
| | | ಸುಳ್ಯ | 1.365 | 1.365 | 1.88 | 1.88 |
| | | | **9.165** | **9.165** | **13.16** | **13.16** |
| 19 | ಉಡುಪಿ | ಕುಂದಾಪುರ | 0.556 | 0.556 | 2.13 | 2.13 |
| | | ಬೈಂದೂರು | 0.556 | 0.556 | 2.13 | 2.13 |
| | | ಬ್ರಹ್ಮಾವರ | 0.556 | 0.556 | 2.13 | 2.13 |

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಪ್ರಾಥಮಿಕ | | ಪ್ರೌಢ | |
|---|---|---|---|---|---|---|
| | | ಉಡುಪಿ | 0.556 | 0.556 | 2.13 | 2.13 |
| | | ಕಾರ್ಕಳ | 0.556 | 0.556 | 2.165 | 2.165 |
| | | | **2.78** | **2.78** | **10.685** | **10.685** |
| 20 | ಬೆಳಗಾಂ | ಬೈಲಹೊಂಗಲ | 1.47 | 1.47 | 0.76 | 0.76 |
| | | ಬೆಳಗಾಂ ನಗರ | 1.47 | 1.47 | 0.76 | 0.76 |
| | | ಬೆಳಗಾಂ ಗ್ರಾಮಾಂತರ | 1.47 | 1.47 | 0.76 | 0.76 |
| | | ಖಾನಾಪುರ | 1.47 | 1.47 | 0.76 | 0.76 |
| | | ರಾಮದುರ್ಗ | 1.47 | 1.47 | 0.76 | 0.76 |
| | | ಸವದತ್ತಿ | 1.48 | 1.48 | 0.81 | 0.81 |
| | | | **8.83** | **8.83** | **4.61** | **4.61** |
| 21 | ಚಿಕ್ಕೋಡಿ | ಅಥಣಿ | 1.14 | 1.14 | 0.79 | 0.79 |
| | | ಕಾಗೇವಾಡಿ | 1.14 | 1.14 | 0.79 | 0.79 |
| | | ಚಿಕ್ಕೋಡಿ | 1.14 | 1.14 | 0.79 | 0.79 |
| | | ನಿಪ್ಪಾಣಿ | 1.14 | 1.14 | 0.79 | 0.79 |
| | | ಗೋಕಾಕ್ | 1.14 | 1.14 | 0.79 | 0.79 |
| | | ಮೂಡಲಗಿ | 1.14 | 1.14 | 0.79 | 0.79 |
| | | ಹುಕ್ಕೇರಿ | 1.14 | 1.14 | 0.79 | 0.79 |
| | | ರಾಯಭಾಗ | 1.155 | 1.155 | 0.825 | 0.825 |
| | | | **9.135** | **9.135** | **6.355** | **6.355** |
| 22 | ಬಿಜಾಪುರ | ಬಸವನ ಬಾಗೇವಾಡಿ | 3.08 | 3.08 | 0.68 | 0.68 |
| | | ಬಿಜಾಪುರ ನಗರ | 3.08 | 3.08 | 0.68 | 0.68 |
| | | ಬಿಜಾಪುರ ಗ್ರಾಮಾಂತರ | 3.08 | 3.08 | 0.68 | 0.68 |
| | | ಇಂಡಿ | 3.08 | 3.08 | 0.68 | 0.68 |
| | | ಚಡಚಣ್ | 3.08 | 3.08 | 0.68 | 0.68 |
| | | ಮುದ್ದೇಬಿಹಾಳ್ | 3.08 | 3.08 | 0.68 | 0.68 |
| | | ಸಿಂದಗಿ | 3.095 | 3.095 | 0.7 | 0.7 |
| | | | **21.575** | **21.575** | **4.78** | **4.78** |
| 23 | ಬಾಗಲಕೋಟೆ | ಬಾದಾಮಿ | 2.015 | 2.015 | 0.92 | 0.92 |
| | | ಬಾಗಲಕೋಟೆ | 2.015 | 2.015 | 0.92 | 0.92 |
| | | ಬೀಳಗಿ | 2.015 | 2.015 | 0.92 | 0.92 |
| | | ಹುನಗುಂದ | 2.015 | 2.015 | 0.92 | 0.92 |
| | | ಜಮಖಂಡಿ | 2.015 | 2.015 | 0.92 | 0.92 |
| | | ಮುಧೋಳ್ | 2.015 | 2.015 | 0.965 | 0.965 |
| | | | **12.09** | **12.09** | **5.565** | **5.565** |
| 24 | ಧಾರವಾಡ | ಧಾರವಾಡ | 0.98 | 0.98 | 0.8 | 0.8 |
| | | ಹುಬ್ಬಳ್ಳಿ | 0.98 | 0.98 | 0.8 | 0.8 |
| | | ಹೆಚ್.ಡಿ.ಎಂ.ಸಿ. | 0.98 | 0.98 | 0.8 | 0.8 |
| | | ಕಲಘಟಗಿ | 0.98 | 0.98 | 0.8 | 0.8 |

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಪ್ರಾಥಮಿಕ | | ಪ್ರೌಢ | |
|---|---|---|---|---|---|---|
| | | ಕುಂದಗೋಳ | 0.98 | 0.98 | 0.8 | 0.8 |
| | | ನವಲಗುಂದ | 1.03 | 1.03 | 0.835 | 0.835 |
| | | | **5.93** | **5.93** | **4.835** | **4.835** |
| 25 | ಗದಗ್ | ಗದಗ ನಗರ | 0.7 | 0.7 | 0.59 | 0.59 |
| | | ಗದಗ ಗ್ರಾಮಾಂತರ | 0.7 | 0.7 | 0.59 | 0.59 |
| | | ಮುಂಡರಗಿ | 0.7 | 0.7 | 0.59 | 0.59 |
| | | ನರಗುಂದ | 0.7 | 0.7 | 0.59 | 0.59 |
| | | ರೋಣ | 0.7 | 0.7 | 0.59 | 0.59 |
| | | ಶಿರಹಟ್ಟಿ | 0.745 | 0.745 | 0.645 | 0.645 |
| | | | **4.245** | **4.245** | **3.595** | **3.595** |
| 26 | ಹಾವೇರಿ | ಬ್ಯಾಡಗಿ | 1.19 | 1.19 | 0.77 | 0.77 |
| | | ಹಾನಗಲ್ | 1.19 | 1.19 | 0.77 | 0.77 |
| | | ಹಾವೇರಿ | 1.19 | 1.19 | 0.77 | 0.77 |
| | | ಹಿರೇಕೆರೂರು | 1.19 | 1.19 | 0.77 | 0.77 |
| | | ರಾಣೆಬೆನ್ನೂರು | 1.19 | 1.19 | 0.77 | 0.77 |
| | | ಸವಣೂರು | 1.19 | 1.19 | 0.77 | 0.77 |
| | | ಶಿಗ್ಗಾಂವ | 1.24 | 1.24 | 0.775 | 0.775 |
| | | | **8.38** | **8.38** | **5.395** | **5.395** |
| 27 | ಉತ್ತರ ಕನ್ನಡ | ಅಂಕೋಲ | 0.965 | 0.965 | 0.79 | 0.79 |
| | | ಭಟ್ಕಳ | 0.965 | 0.965 | 0.79 | 0.79 |
| | | ಹಳಿಯಾಳ | 0.965 | 0.965 | 0.79 | 0.79 |
| | | ಹೊನ್ನಾವರ | 0.965 | 0.965 | 0.79 | 0.79 |
| | | ಜೋಯಿಡ | 0.965 | 0.965 | 0.79 | 0.79 |
| | | ಕಾರವಾರ | 0.965 | 0.965 | 0.79 | 0.79 |
| | | ಕುಮುಟ | 0.965 | 0.965 | 0.79 | 0.79 |
| | | ಮುಂಡಗೋಡು | 0.965 | 0.965 | 0.79 | 0.79 |
| | | ಸಿದ್ದಾಪುರ | 0.965 | 0.965 | 0.79 | 0.79 |
| | | ಸಿರಸಿ | 0.965 | 0.965 | 0.79 | 0.79 |
| | | ಯಲ್ಲಾಪುರ | 0.975 | 0.975 | 0.87 | 0.87 |
| | | | **10.625** | **10.625** | **8.77** | **8.77** |
| 28 | ಗುಲ್ಬರ್ಗಾ | ಅಫಜಲ್ ಪುರ | 1.44 | 1.44 | 1.18 | 1.8 |
| | | ಆಳಂದ | 1.44 | 1.44 | 1.18 | 1.8 |
| | | ಚಿಂಚೋಳಿ | 1.44 | 1.44 | 1.18 | 1.8 |
| | | ಚಿತ್ತಾಪುರ | 1.44 | 1.44 | 1.18 | 1.8 |
| | | ಗುಲ್ಬರ್ಗ ಉತ್ತರ | 1.44 | 1.44 | 1.18 | 1.8 |
| | | ಗುಲ್ಬರ್ಗ ದಕ್ಷಿಣ | 1.44 | 1.44 | 1.18 | 1.8 |
| | | ಜೇವರ್ಗಿ | 1.455 | 1.455 | 1.185 | 1.185 |
| | | | **10.095** | **10.095** | **8.265** | **8.265** |

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಪ್ರಾಥಮಿಕ | | ಪ್ರೌಢ | |
|---|---|---|---|---|---|---|
| 29 | ಯಾದಗಿರಿ | ಸೇಡಂ | 1.975 | 1.975 | 1.7 | 1.7 |
| | | ಶಹಾಪುರ | 1.975 | 1.975 | 1.7 | 1.7 |
| | | ಸುರಪುರ | 1.975 | 1.975 | 1.7 | 1.7 |
| | | ಯಾದಿಗಿರ | 1.975 | 1.975 | 1.815 | 1.815 |
| | | | **7.9** | **7.9** | **6.915** | **6.915** |
| 30 | ಬಳ್ಳಾರಿ | ಬಳ್ಳಾರಿ ಪೂರ್ವ | 1.38 | 1.38 | 1.18 | 1.18 |
| | | ಬಳ್ಳಾರಿ ಪಶ್ಚಿಮ | 1.38 | 1.38 | 1.18 | 1.18 |
| | | ಹಡಗಲಿ | 1.38 | 1.38 | 1.18 | 1.18 |
| | | ಹಗರಿಬೊಮ್ಮನಹಳ್ಳಿ | 1.38 | 1.38 | 1.18 | 1.18 |
| | | ಹೊಸಪೇಟೆ | 1.38 | 1.38 | 1.18 | 1.18 |
| | | ಕೂಡ್ಲಿಗಿ | 1.38 | 1.38 | 1.18 | 1.18 |
| | | ಸಂಡೂರು | 1.38 | 1.38 | 1.18 | 1.18 |
| | | ಶಿರಗುಪ್ಪ | 1.415 | 1.415 | 1.245 | 1.245 |
| | | | **11.075** | **11.075** | **9.505** | **9.505** |
| 31 | ರಾಯಚೂರು | ದೇವದುರ್ಗ | 1.737 | 1.737 | 1.56 | 1.56 |
| | | ಲಿಂಗಸೂಗುರು | 1.737 | 1.737 | 1.56 | 1.56 |
| | | ಮಾನ್ವಿ | 1.737 | 1.737 | 1.56 | 1.56 |
| | | ರಾಯಚೂರು | 1.737 | 1.737 | 1.56 | 1.56 |
| | | ಸಿಂಧನೂರು | 1.737 | 1.737 | 1.575 | 1.575 |
| | | | **8.685** | **8.685** | **7.815** | **7.815** |
| 32 | ಕೊಪ್ಪಳ | ಗಂಗಾವತಿ | 1.15 | 1.15 | 1.11 | 1.11 |
| | | ಕೊಪ್ಪಳ | 1.15 | 1.15 | 1.11 | 1.11 |
| | | ಕುಷ್ಟಗಿ | 1.15 | 1.15 | 1.11 | 1.11 |
| | | ಯಲಬುರ್ಗಾ | 1.16 | 1.16 | 1.11 | 1.11 |
| | | | **4.61** | **4.61** | **4.44** | **4.44** |
| 33 | ಬೀದರ್ | ಔರಾದ್ | 1.49 | 1.49 | 1.923 | 1.923 |
| | | ಬಸವಕಲ್ಯಾಣ | 1.49 | 1.49 | 1.923 | 1.923 |
| | | ಬಾಲ್ಕಿ | 1.49 | 1.49 | 1.923 | 1.923 |
| | | ಬೀದರ್ | 1.49 | 1.49 | 1.923 | 1.923 |
| | | ಹುಮ್ನಾಬಾದ್ | 1.49 | 1.49 | 1.923 | 1.923 |
| | | | **7.45** | **7.45** | **9.615** | **9.615** |
| | | | **281.215** | **281.215** | **281.215** | **281.215** |

**ಐ.ಎಫ್. ಮಾಗಿ**

ಪಿ.ಆರ್.586

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ)

## ಕಾರ್ಮಿಕ ಸಚಿವಾಲಯ

**ವಿಷಯ :** ಡಾ: ಸಿ.ಈ. ಶೋಭಾ, ವಿಮಾ ವೈದ್ಯಾಧಿಕಾರಿ, ಕಾರಾವಿ ಯೋಜನೆ (ವೈ) ಸೇವೆಗಳು ಇವರು ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾದ ಬಗ್ಗೆ ಶಿಸ್ತು ಕ್ರಮ ಕೈಗೊಳ್ಳುವ ಕುರಿತು.

**ಓದಲಾಗಿದೆ:** 1. ನಿರ್ದೇಶಕರು, ಕಾರಾವಿ ಯೋಜನೆ (ವೈ) ಸೇವೆಗಳು ಇವರ ಪತ್ರ ಸಂಖ್ಯೆ: ಇಎಸ್ಐಎಸ್/ಇವಿ/35/05–06, ದಿ: 18–2–2006.

2. ಸರ್ಕಾರದ ನೋಟೀಸ್ ಸಂಖ್ಯೆ: ಕಾಇ 72 ಎಲ್ಎಸ್ಐ 2006, ದಿನಾಂಕ 13–3–2006.

3. ಸರ್ಕಾರಿ ಆದೇಶ ಸಂಖ್ಯೆ: ಕಾಇ 72 ಎಲ್ಎಸ್ಐ 2006, ದಿನಾಂಕ 31–8–2006.
4. ವಿಚಾರಣಾಧಿಕಾರಿಗಳ ದಿನಾಂಕ 9–5–2007ರ ವಿಚಾರಣಾ ವರದಿ.
5. ಸರ್ಕಾರದ 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ. ಕಾಇ 72 ಎಲ್ಎಸ್ಐ 2006, ದಿನಾಂಕ 11–7–2007.

**ಪ್ರಸ್ತಾವನೆ :**

ನಿರ್ದೇಶಕರು, ಕಾರಾವಿ ಯೋಜನೆ (ವೈ) ಸೇವೆಗಳು ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ 18–2–2006ರ ತಮ್ಮ ಪತ್ರದಲ್ಲಿ ಕಾರಾವಿ ಚಿಕಿತ್ಸಾಲಯ, ಜಿಗಣಿ, ಬೆಂಗಳೂರು ಇಲ್ಲಿ ವಿಮಾ ವೈದ್ಯಾಧಿಕಾರಿಯಾಗಿ ಸೇವೆ ಸಲ್ಲಿಸುತ್ತಿದ್ದ ಡಾ: ಸಿ.ಈ. ಶೋಭಾ, ಇವರು ದಿನಾಂಕ 25–7–2005 ರಿಂದ ಇಲ್ಲಿಯವರೆಗೆ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರು ಹಾಜರಾಗಿರುವುದಾಗಿ ವರದಿ ಮಾಡುತ್ತಾ ಇವರಿಗೆ ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಿ ದಿನಾಂಕ 28–9–2005, 5–11–2005 ಮತ್ತು 3–12–2005 ರಂದು ಸೂಚನಾ ಪತ್ರಗಳನ್ನು ಕಳುಹಿಸಲಾಗಿದ್ದರೂ ಸಹ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲವೆಂದು ಆದ್ದರಿಂದ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11ರಡಿ ಶಿಸ್ತುಕ್ರಮ ಕೈಗೊಳ್ಳುವಂತೆ ಕೋರಿದ್ದರು. ಡಾ: ಸಿ.ಈ. ಶೋಭಾ, ವಿಮಾ ವೈದ್ಯಾಧಿಕಾರಿ ಇವರ ಅನಧಿಕೃತ ಗೈರು ಹಾಜರಾತಿಗೆ ಸಂಬಂಧಿಸಿದಂತೆ ಮೇಲೆ (2)ರಲ್ಲಿ ಓದಲಾದ ದಿನಾಂಕ 13–3–2006ರ ಷೋಕಾಸ್ ನೋಟೀಸ್‌ನೊಂದಿಗೆ ದೋಷಾರೋಪಣಾ ಪಟ್ಟಿಯನ್ನು ನೋಂದಾಯಿತ ಅಂಚೆ ಸ್ವೀಕೃತಿ ಮೂಲಕ ಜಾರಿ ಮಾಡಿ ತಮ್ಮ ರಕ್ಷಣಾ ಹೇಳಿಕೆ ಏನಾದರೂ ಇದ್ದಲ್ಲಿ ಈ ನೋಟೀಸ್ ತಲುಪಿದ 15 ದಿನಗಳ ಒಳಗಾಗಿ ಲಿಖಿತ ಮೂಲಕ ಸರ್ಕಾರಕ್ಕೆ ಸಲ್ಲಿಸಲು ಸೂಚಿಸಲಾಗಿತ್ತು. ಡಾ: ಸಿ.ಈ. ಶೋಭಾ, ವಿಮಾ ವೈದ್ಯಾಧಿಕಾರಿ, ಇವರ ಅನಧಿಕೃತ ಗೈರು ಹಾಜರಾತಿಗೆ ಸಂಬಂಧಿಸಿದಂತೆ ದಿನಾಂಕ 13–3–2006ರ ಷೋಕಾಸ್ ನೋಟೀಸಿನೊಂದಿಗೆ ಕಳುಹಿಸಲಾದ ದೋಷಾರೋಪಣೆಗಳಿಗೆ ಸದರಿ ವೈದ್ಯರು ನಿಗಧಿತ ಅವಧಿಯಲ್ಲಿ ತಮ್ಮ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ.

ಡಾ: ಸಿ.ಈ. ಶೋಭಾ, ವಿಮಾ ವೈದ್ಯಾಧಿಕಾರಿ ಇವರು ದಿನಾಂಕ 25–7–2005 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವರೆಂಬ ಆರೋಪಗಳಿಗೆ ಸಂಬಂಧಿಸಿದಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11ರ ಅನುಸಾರ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಹೆಚ್.ಪಿ. ದೇವೇಂದ್ರಯ್ಯ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶ್ರೀ ಮನೋಹರ್ ಕೆ. ಗೂಡೂರ್, ಪ್ರ.ದ.ಸ. ಕಾರಾವಿ ಯೋಜನೆ (ವೈ) ಸೇವೆಗಳು ನಿರ್ದೇಶನಾಲಯ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಹಾಗೂ ಇಲಾಖಾ ವಿಚಾರಣೆಯನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 11ರ ವಿಧಿ ವಿಧಾನಗಳ ಅನುಸಾರ ಜರುಗಿಸಿ ವಿಚಾರಣಾ ವರದಿಯನ್ನು ಮೂರು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದೆಂದು ಆದೇಶಿಸಲಾಗಿತ್ತು. ಅದರಂತೆ ವಿಚಾರಣಾಧಿಕಾರಿಗಳು ಡಾ: ಸಿ.ಈ. ಶೋಭಾ, ವಿಮಾ ವೈದ್ಯಾಧಿಕಾರಿ ಇವರ ಅನಧಿಕೃತ ಗೈರು ಹಾಜರಾತಿಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆ ನಡೆಸಿ ದಿನಾಂಕ 9–5–2007ರಂದು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ವಿಚಾರಣಾಧಿಕಾರಿಗಳು ತಮ್ಮ ವಿಚಾರಣಾ ವರದಿಯಲ್ಲಿ ಆಪಾದಿತ ಸರ್ಕಾರಿ ನೌಕರನ ಮೇಲೆ ಮಾಡಲಾದ ದೋಷಾರೋಪಣೆಗಳು ರುಜುವಾತಾಗಿರುವುದಾಗಿ ಅಭಿಪ್ರಾಯಪಟ್ಟಿರುತ್ತಾರೆ.

ವಿಚಾರಣಾ ವರದಿಯಲ್ಲಿನ ಅಂಶಗಳನ್ನು ಏಕೆ ಒಪ್ಪಿಕೊಳ್ಳಬಾರದೆಂಬ ಬಗ್ಗೆ ತಮ್ಮ ಅಹವಾಲೇನಾದರೂ ಸಲ್ಲಿಸುವುದಿದ್ದರೆ ನೋಟೀಸ್ ತಲುಪಿದ 15 ದಿನಗಳ ಒಳಗಾಗಿ ಸಲ್ಲಿಸುವಂತೆ ಸೂಚಿಸಿ ಮೇಲೆ (5)ರಲ್ಲಿ ಓದಲಾದ 2ನೇ ಕಾರಣ ಕೇಳುವ ನೋಟೀಸನ್ನು ಆಪಾದಿತ ಸರ್ಕಾರಿ ನೌಕರರಿಗೆ ಜಾರಿ ಮಾಡಲಾಗಿತ್ತು. ಸದರಿ ನೋಟೀಸಿಗೆ ವೈದ್ಯರು ಯಾವುದೇ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ.

ಪ್ರಸ್ತುತ ಪ್ರಕರಣದಲ್ಲಿ ಡಾ: ಸಿ.ಈ. ಶೋಭಾ, ವಿಮಾ ವೈದ್ಯಾಧಿಕಾರಿ ಇವರ ಅನಧಿಕೃತ ಗೈರು ಹಾಜರಾತಿಗೆ ಸಂಬಂಧಿಸಿದಂತೆ ನಡೆಸಲಾದ ಇಲಾಖಾ ವಿಚಾರಣೆಯಿಂದ ಇವರ ವಿರುದ್ಧ ಮಾಡಲಾಗಿರುವ ಆರೋಪ ಸಾಬೀತಾಗಿರುವುದರಿಂದ ಇವರಿಗೆ ಕರ್ನಾಟಕ ಸಿವಿಲ್ ಸೇವಾ ನಿಯಮಾವಳಿಗಳ ನಿಯಮ 108 ಹಾಗೂ ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8 (viii)ರ ಪ್ರಕಾರ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸುವ ಬಗ್ಗೆ ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 72 ಎಲ್ಎಸ್ಐ 2006, ಬೆಂಗಳೂರು, ದಿನಾಂಕ: 13ನೇ ಜನವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ಡಾ: ಸಿ.ಈ. ಶೋಭಾ, ವಿಮಾ ವೈದ್ಯಾಧಿಕಾರಿ, ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈ) ಸೇವೆಗಳು ಇವರು ದಿನಾಂಕ 25–7–2005 ರಿಂದ ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾಗಿರುವ ಆರೋಪ ಇಲಾಖಾ ವಿಚಾರಣೆಯಿಂದ ಸಾಬೀತಾಗಿರುವುದರಿಂದ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 108ರ ಅನ್ವಯ ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ)

ನಿಯಮಗಳು 1957ರ ನಿಯಮ 8(viii)ರ ಅನುಸಾರ ಸರ್ಕಾರಿ ನೌಕರಿಗೆ ಪ್ರವೇಶಕ್ಕೆ ಅನರ್ಹತೆಯಾಗುವ ರೀತಿಯಲ್ಲಿ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲಾಗಿದೆ. ಹಾಗೂ ತಕ್ಷಣದಿಂದ ಜಾರಿಗೆ ಬರುವಂತೆ ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.495

**ಗೋವಿಂದಸ್ವಾಮಿ**

ಪೀಠಾಧಿಕಾರಿ, ಕಾರ್ಮಿಕ ಇಲಾಖೆ (ಕಾರಾವಿ ಯೋ (ವೈ) ಸೇವೆಗಳು)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಶ್ರೀ ಎಸ್.ಆರ್. ನಿಡಗುಂದಿ, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಸೇಡಂ ಇವರನ್ನು ಅಮಾನತ್ತುಗೊಳಿಸುವ ಕುರಿತು.

**ಓದಲಾಗಿದೆ:** ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ಅ.ಸ. ಪತ್ರ ಸಂಖ್ಯೆ: ಗಭೂಇ/ಆ.ಶಾ./ 2008–09/3622, ದಿನಾಂಕ 7–1–2009.

**ಪ್ರಸ್ತಾವನೆ :**

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ದಿ: 20–12–08ರಂದು ಸರ್ವೆ ನಂ. 66(ಭಾಗ) ಕೊರವಿ ಗ್ರಾಮ, ಚಿಂಚೋಳಿ ತಾಲ್ಲೂಕು, ಗುಲ್ಬರ್ಗ ಜಿಲ್ಲೆ, ಇಲ್ಲಿ ಇಲಾಖೆಯಿಂದ ಗಣಿಗುತ್ತಿಗೆ ಪಡೆಯದೇ ಅನಧಿಕೃತವಾಗಿ ಕಾರ್ಯನಿರ್ವಹಿಸುತ್ತಿದ್ದ JCB No. KA 32 M 6253 ಅನ್ನು ಚಾಲಿತ ದಳದ ತಂಡವು ತನ್ನ ವಶಕ್ಕೆ ತೆಗೆದುಕೊಂಡು ಶ್ರೀ ಎಸ್.ಆರ್. ನಿಡಗುಂದಿ, ಉಪನಿರ್ದೇಶಕರು, ಸೇಡಂ ಇವರನ್ನು ಸ್ಥಳಕ್ಕೆ ಕರೆಸಿ ಪಂಚನಾಮೆ ಮಾಡಿಸಿದ್ದು, ಆ ಸಮಯದಲ್ಲಿ ಹಾಜರಿದ್ದ Assistant Sub-Inspector of Police, ಸೂಲೇಪೇಟೆ ಇವರೂ ಹಾಜರಿದ್ದು, ಈ ಪ್ರಕರಣದ ಕುರಿತು ಮೊಕದ್ದಮೆ ದಾಖಲಿಸುವಂತೆ ಶ್ರೀ ಎಸ್.ಆರ್. ನಿಡಗುಂದಿ, ಉಪನಿರ್ದೇಶಕರು, ಸೇಡಂ ಇವರಿಗೆ ಬರವಣಿಗೆಯಲ್ಲಿ ಪತ್ರವನ್ನು ನೀಡಿ, ಸ್ವೀಕೃತಿಯನ್ನು ಪಡೆಯಲಾಗಿದೆ. ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ದಾಖಲಿಸಲು ಆದೇಶಿಸಿ, ಚಾಲಿತ ದಳದ ತಂಡವು ಅಲ್ಲಿಂದ ಬೇರೆ ಕಡೆ ಕಾರ್ಯಾಚರಣೆಗೆ ಹೊರಟಿರುತ್ತದೆ. ದಿ: 22–12–08 ರಂದು ಉಪನಿರ್ದೇಶಕರು, ಚಾಲಿತ ದಳ, ಇವರು ಮೊಕದ್ದಮೆ ದಾಖಲಿಸಿದ ಬಗ್ಗೆ ಶ್ರೀ ಎಸ್.ಆರ್. ನಿಡಗುಂದಿ, ಉಪನಿರ್ದೇಶಕರು, ಸೇಡಂ ಇವರನ್ನು ದೂರವಾಣಿಯಲ್ಲಿ ಸಂಪರ್ಕಿಸಿ ವಿಚಾರಿಸಲಾಗಿ, ಮೊಕದ್ದಮೆ ದಾಖಲಿಸಿರುವುದಿಲ್ಲವೆಂದು ತಿಳಿಸಿ, ಅಸಭ್ಯವಾಗಿ ಉತ್ತರವನ್ನು ನೀಡಿರುತ್ತಾರೆಂದು ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರು ಮೇಲೆ ಓದಲಾದ (1)ರ ಪತ್ರದಲ್ಲಿ ತಿಳಿಸಿರುತ್ತಾರೆ.

ಚಾಲಿತ ದಳದ ತಂಡವು ದಿ: 22–12–08ರಂದು ಕೊರವಿ ಗ್ರಾಮದಲ್ಲಿ ಅನಧಿಕೃತ ಗಣಿಗಾರಿಕೆ ನಡೆಸುತ್ತಿರುವ ಸ್ಥಳಗಳನ್ನು ಪರಿಶೀಲಿಸುವಾಗ, ಚಾಲಿತ ದಳ ತಂಡವು ಚಿಂಚೋಳಿ ತಾಲ್ಲೂಕಿನಲ್ಲಿ ಕಾರ್ಯಾಚರಣೆ ಮಾಡುವ ಬಗ್ಗೆ ಅನಧಿಕೃತ ಗಣಿಗಾರಿಕೆದಾರರಿಗೆ ಉಪನಿರ್ದೇಶಕರು, ಸೇಡಂ ಇವರು ಮಾಹಿತಿ ನೀಡಿರುವುದು ಸ್ಥಳೀಯರಿಂದ ತಿಳಿದು ಬಂದಿರುತ್ತದೆ. ಚಾಲಿತ ದಳದ ತಂಡವು ಗಸ್ತು ತಿರುಗುತ್ತಿದ್ದಾಗ ವಾಹನ ಸಂಖ್ಯೆ: AP 16 TT 4268 ರಲ್ಲಿ 21 MT ಪುಲ್ಲರ್ಸ್ ಅರ್ತ್ ಖನಿಜ ರವಾನಿಸುತ್ತಿರುವ ವಾಹನವನ್ನು ಕೊರವಿ ಗ್ರಾಮದಲ್ಲಿ ಚಾಲಿತ ದಳದ ವಶಕ್ಕೆ ಮೂಲ ದಾಖಲೆಗಳೊಂದಿಗೆ ವಶಪಡಿಸಿಕೊಂಡು, ಶ್ರೀ ಎಸ್.ಆರ್. ನಿಡಗುಂದಿ, ಉಪನಿರ್ದೇಶಕರು, ಸೇಡಂ ಇವರಿಗೆ ಎಲ್ಲಾ ದಾಖಲಾತಿಗಳನ್ನು ಮತ್ತು ವಾಹನವನ್ನು ವಹಿಸಿಕೊಟ್ಟು, ಪರವಾನಗಿ ಮಿತಿ 17 MT ಇದ್ದು, ಹೆಚ್ಚುವರಿಯಾಗಿ 21 MT ಇರುವುದರಿಂದ ರೂ. 25,000/–ಗಳ ದಂಡವನ್ನು ವಸೂಲಿ ಮಾಡಿ, ಸರ್ಕಾರಕ್ಕೆ ಜಮಾ ಮಾಡಲು ಆದೇಶಿಸಿರುತ್ತದೆ. ದಂಡ ವಸೂಲಿ ಮಾಡಿದ ಬಗ್ಗೆ ದಿ: 22–12–08 ರಂದು ದೂರವಾಣಿಯಲ್ಲಿ ವಿಚಾರಿಸಿದಾಗ, ಶ್ರೀ ಎಸ್.ಆರ್. ನಿಡಗುಂದಿ, ಉಪನಿರ್ದೇಶಕರು, ಸೇಡಂ ಇವರು ಅಸಭ್ಯತೆಯಿಂದ ಉತ್ತರಿಸಿ, ವಾಹನ ಸಂಖ್ಯೆ AP 16 TT 4268 ರಲ್ಲಿ 21 MT ಪುಲ್ಲರ್ಸ್ ಅರ್ತ್ ಖನಿಜವು 17 MT ಸರಿಯಿರುತ್ತದೆಯೆಂದು ಹೇಳಿ, ದಂಡವನ್ನು ವಸೂಲಿ ಮಾಡದೇ ವಾಹನವನ್ನು ಹಾಗೇ ಬಿಟ್ಟಿರುತ್ತಾರೆಂದು ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರು ಮೇಲೆ ಓದಲಾದ (1)ರ ಪತ್ರದಲ್ಲಿ ತಿಳಿಸಿರುತ್ತಾರೆ.

ಇದಲ್ಲದೇ, ಗುಲ್ಬರ್ಗ ಜಿಲ್ಲೆ, ಚಿಂಚೋಳಿ ತಾಲ್ಲೂಕು, ಕೊರವಿ, ಸುಲೇಪೇಟೆ, ಗುಡ್ಡಹಳ್ಳಿ ಗ್ರಾಮ, ವಜ್ರಗಾಂ ಮುಂತಾದ ಗ್ರಾಮಗಳ ವ್ಯಾಪ್ತಿಯಲ್ಲಿ ಇಲಾಖೆಯಿಂದ ಪರವಾನಗಿ ಪಡೆಯದೇ ಅನಧಿಕೃತವಾಗಿ ಪ್ರತಿ ದಿನ 15 ರಿಂದ 20 ಲಾರಿ ಲೋಡಿನಷ್ಟು ಪುಲರ್ಸ್ ಅರ್ತ್ ಖನಿಜವನ್ನು ಬೇರೆ ಕಡೆಗೆ ಸಾಗಿಸುತ್ತಿರುವುದು ಚಾಲಿತ ದಳದ ತಂಡಕ್ಕೆ ತಿಳಿದು ಬಂದಿದ್ದು, ಈ ಬಗ್ಗೆ ನಿಯಮಾನುಸಾರ ಕಟ್ಟುನಿಟ್ಟಾಗಿ ಕ್ರಮವಹಿಸಲು ಇಲಾಖೆಯ ಖನಿಜಾಧಿಕಾರಿಗಳ ಸಭೆಯಲ್ಲಿ ನಿರ್ದೇಶನವನ್ನು ನೀಡಿದ್ದರೂ ಸಹ ಶ್ರೀ ಎಸ್.ಆರ್. ನಿಡಗುಂದಿ, ಉಪನಿರ್ದೇಶಕರು, ಸೇಡಂ ಇವರು ಯಾವುದೇ ಕ್ರಮ ಕೈಗೊಳ್ಳದೇ ಅನಧಿಕೃತ ಗಣಿಗಾರಿಕೆ ನಡೆಸುತ್ತಿರುವವರೊಂದಿಗೆ ಶಾಮೀಲಾಗಿ, ಅವ್ಯವಹಾರದಲ್ಲಿ ತೊಡಗಿರುವುದಲ್ಲದೇ ಚಾಲಿತ ದಳದ ತಂಡವು ಗುಲ್ಬರ್ಗಾ ಜಿಲ್ಲೆಯಲ್ಲಿ ನಡೆಸುತ್ತಿರುವ ಕಾರ್ಯಾಚರಣೆಗಳ ಕುರಿತು ಮಾಹಿತಿಯನ್ನು ಅನಧಿಕೃತ ಗಣಿಗಾರಿಕೆ ನಡೆಸುತ್ತಿರುವವರಿಗೆ ನೀಡಿರುವುದು ಕಂಡು ಬಂದಿರುತ್ತದೆಯೆಂದು, ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರು ಮೇಲೆ ಓದಲಾದ (1)ರ ಪತ್ರದಲ್ಲಿ ತಿಳಿಸಿರುತ್ತಾರೆ.

ಈ ಅಂಶಗಳ ಬಗ್ಗೆ ದಿ: 24–12–08ರಂದು ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರು ಶ್ರೀ ಎಸ್.ಆರ್. ನಿಡಗುಂದಿ, ಉಪನಿರ್ದೇಶಕರು, ಸೇಡಂ ಇವರನ್ನು ದೂರವಾಣಿಯ ಮುಖಾಂತರ ಸಂಪರ್ಕಿಸಿದಾಗ, JCB No. KA 32 M 6253 ವಾಹನಕ್ಕೆ ಮೊಕದ್ದಮೆ ದಾಖಲಿಸದೇ ಇರುವುದು ಮತ್ತು 21 MT ಫುಲ್ಲರ್ಸ್ ಅರ್ತ್ ಖನಿಜ ರವಾನಿಸುತ್ತಿದ್ದ ವಾಹನ ಸಂಖ್ಯೆ: AP 16 TT 4268 ಕ್ಕೆ ವಿಧಿಸಿದ್ದ ದಂಡವನ್ನು ವಸೂಲಿ ಮಾಡದಿರುವುದು ಖಾತರಿಯಾಗಿರುತ್ತದೆಯೆಂದು ತಿಳಿಸುತ್ತಾ, ಶ್ರೀ ಎಸ್.ಆರ್. ನಿಡಗುಂದಿ, ಉಪನಿರ್ದೇಶಕರು, ಸೇಡಂ ಇವರು ಕರ್ತವ್ಯ ನಿರ್ಲಕ್ಷ್ಯತೆಯನ್ನು ತೋರಿಸಿ, ತಮ್ಮ ಅಧಿಕಾರ ದುರುಪಯೋಗಪಡಿಸಿಕೊಂಡಿರುವುದು ಮತ್ತು ಸರ್ಕಾರದ ಬೊಕ್ಕಸಕ್ಕೆ ನಷ್ಟವುಂಟಾಗಲು ಕಾರಣಕರ್ತರಾಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಇವರನ್ನು ಅಮಾನತ್ತುಗೊಳಿಸಲು ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರು ಮೇಲೆ ಓದಲಾದ (1)ರ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 04 ಎಂಜಿಎಸ್ 2009, ಬೆಂಗಳೂರು, ದಿನಾಂಕ: 19ನೇ ಜನವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಮೇರೆಗೆ, ಶ್ರೀ ಎಸ್.ಆರ್. ನಿಡಗುಂದಿ, ಉಪನಿರ್ದೇಶಕರು, ಸೇಡಂ ಇವರ ವಿರುದ್ಧದ ಆರೋಪಗಳ ಕುರಿತು ವಿಚಾರಣೆಯನ್ನು ಕಾಯ್ದಿರಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10(1)(ಡಿ)ರ ಪ್ರಕಾರ, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರವು ಅಮಾನತ್ತುಗೊಳಿಸಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎಸ್.ಆರ್. ನಿಡಗುಂದಿ ಇವರು ನಿಯಮಗಳ ಪ್ರಕಾರ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎಸ್.ಆರ್. ನಿಡಗುಂದಿ ಇವರು ನಿಯಮಗಳ ಪ್ರಕಾರ ಸಕ್ಷಮ ಪ್ರಾಧಿಕಾರಿಯವರ ಲಿಖಿತ ಅನುಮತಿಯ ಪಡೆಯದೆ, ಕೇಂದ್ರ ಕಾರ್ಯಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.488

**ಎ.ಪಿ. ರಾಮಕೃಷ್ಣ**

ಪೀಠಾಧಿಕಾರಿ (ಗಣಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ವಿಷಯ :** ಶ್ರೀ ಪಿ.ವಿ. ಮನೋಹರನ್, ಉಪನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಬೆಂಗಳೂರು, ಇವರ ವಿರುದ್ಧದ ಶಿಸ್ತು ಕ್ರಮ ಕುರಿತು – ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**
1. ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಇವರ ಪತ್ರಸಂಖ್ಯೆ: ಕಾಮಾಇ/ಸಿಬ್ಬಂದಿ/2/ಸಿಆರ್–123/03–04, ದಿನಾಂಕ 7–10–2003.
2. ಸರ್ಕಾರದ ನೋಟೀಸ್ ಸಂಖ್ಯೆ: ಆನಾಸ 95 ಕಾಮಾಸೇ 2003, ದಿನಾಂಕ 30–6–2004.
3. ಶ್ರೀ ಪಿ.ವಿ. ಮನೋಹರನ್, ಕಾನೂನು ಮಾಪನಶಾಸ್ತ್ರ ಉಪನಿಯಂತ್ರಕರು ಇವರ ಲಿಖಿತ ಉತ್ತರ ದಿನಾಂಕ 18–8–2004.
4. ಸರ್ಕಾರದ ಆದೇಶ ಸಂಖ್ಯೆ: ಆನಾಸ 95 ಕಾಮಾಸೇ 03, ದಿನಾಂಕ 4–8–2006.
5. ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ 16–4–2007.
6. ಶ್ರೀ ಪಿ.ವಿ. ಮನೋಹರನ್, ಇವರ ರಕ್ಷಣಾ ಹೇಳಿಕೆ ದಿನಾಂಕ 15–7–2007.
7. ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಇವರ ಪತ್ರ ಸಂಖ್ಯೆ: ಕಾಮಾಇ/ಸಿಬ್ಬಂದಿ/1/ಸಿಆರ್–77/05–06, ದಿನಾಂಕ 28–6–2005.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ನಿಯಂತ್ರಕರ ಪತ್ರದಲ್ಲಿ ಶ್ರೀ ಎನ್. ವಿಶ್ವನಾಥ್, ನಿರೀಕ್ಷಕರು, ಕಾನೂನು ಮಾಪನಶಾಸ್ತ್ರ ಇಲಾಖೆ (ಸ್ವತಂತ್ರ ಪ್ರಭಾರ) ಇವರು ವೃಂದ ಬದಲಾವಣೆ ಹೊಂದಿದ್ದು ಅರ್ಹತೆ ಇಲ್ಲದಿದ್ದರೂ ಸಹ ಸದರಿಯವರಿಗೆ ಸ್ವಯಂ ಚಾಲಿತ ಹಿರಿಯ ವೇತನ ಶ್ರೇಣಿ ಮಂಜೂರು ಮಾಡಲು ಕಾರಣರಾದ ಶ್ರೀ ಪಿ.ವಿ. ಮನೋಹರನ್, ಉಪನಿಯಂತ್ರಕರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಪ್ರಸ್ತಾಪಿಸಲ್ಪಟ್ಟಿರುತ್ತದೆ.

ಮೇಲೆ ಓದಲಾದ (2)ರ ಸರ್ಕಾರದ ನೋಟೀಸ್ ದಿನಾಂಕ 30–6–04ರಲ್ಲಿ ಶ್ರೀ ಪಿ.ವಿ. ಮನೋಹರನ್, ಉಪನಿಯಂತ್ರಕರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಕರ್ನಾಟಕ ನಾಗರೀಕ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 11ರಡಿಯಲ್ಲಿ ಆರೋಪ ಪಟ್ಟಿ ಜಾರಿ ಮಾಡಲಾಗಿದೆ.

ಮೇಲೆ ಓದಲಾದ (3)ರ ಪತ್ರದಲ್ಲಿ ಸದರಿ ಅಧಿಕಾರಿಯವರು ಲಿಖಿತ ಸಮಜಾಯಿಸಿ ನೀಡಿ ತಮ್ಮ ವಿರುದ್ಧದ ಆರೋಪಗಳನ್ನು ನಿರಾಕರಿಸಿ ತಮ್ಮ ಮೇಲಿನ ವಿಚಾರಣೆ ಕೈಬಿಡಬೇಕೆಂದು ಕೋರಿರುತ್ತಾರೆ.

ಮೇಲೆ ಓದಲಾದ (4)ರ ಸರ್ಕಾರದ ಆದೇಶ ದಿನಾಂಕ 4–8–2006ರಲ್ಲಿ ಅಧಿಕಾರಿಯವರು ನೀಡಿದ ಲಿಖಿತ ಹೇಳಿಕೆಯನ್ನು ಒಪ್ಪದೇ ಕೆ.ಸಿ.ಎಸ್.ಆರ್. ಸಿ.ಸಿ.ಎ. ನಿಯಮ 11ರಂತೆ ವಿಚಾರಣೆ ನಡೆಸಲು ಉದ್ದೇಶಿಸಿ ವಿಚಾರಣಾಧಿಕಾರಿಯವರನ್ನು ನೇಮಿಸಲಾಗಿತ್ತು.

ಮೇಲೆ ಓದಲಾದ (5)ರಲ್ಲಿ ವಿಚಾರಣಾಧಿಕಾರಿಯವರು ಸಲ್ಲಿಸಿದ ವಿಚಾರಣಾ ವರದಿ ದಿನಾಂಕ 16–4–2007ರಲ್ಲಿ ಹೀಗೆ ಹೇಳಲಾಗಿದೆ:

> "...... ಶ್ರೀ ಪಿ.ವಿ. ಮನೋಹರನ್‌ರವರ ವಿರುದ್ಧದ ಆರೋಪವು ರುಜುವಾತು ಆಗಿರುತ್ತದೆ. ಕಛೇರಿಯಲ್ಲಿ ಸಾಮಾನ್ಯವಾಗಿ ದುರುದ್ದೇಶವಿಲ್ಲದೇ ಇಂತಹ ಒಂದೊಂದು ತಪ್ಪುಗಳು ಉಂಟಾಗಬಹುದೆಂಬುದು ನಿಜವಾದರೂ ಪ್ರಸ್ತುತ ಪ್ರಕರಣದಲ್ಲಿ ಸರ್ಕಾರಿ ಆದೇಶಗಳ ಉಲ್ಲಂಘನೆಯಾಗಿದ್ದು ಆರ್ಥಿಕ ನಷ್ಟಕ್ಕೆ ಕಾರಣವಾಗಿದೆ".

ಮೇಲೆ ಓದಲಾದ (6)ರ ಆರೋಪಿತ ಅಧಿಕಾರಿಯವರ ರಕ್ಷಣಾ ಹೇಳಿಕೆ ದಿನಾಂಕ 15–7–2007ರಲ್ಲಿ ಆಡಳಿತಾತ್ಮಕ ಕ್ರಮಗಳಲ್ಲಿ ಇಂತಹ ಪ್ರಕರಣಗಳು ಯಾವುದೇ ದುರುದ್ದೇಶದಿಂದ ಆಗಿರುವುದಿಲ್ಲವೆಂದು ಪರಿಗಣಿಸಿ ಹಾಗೂ ಹೆಚ್ಚುವರಿಯಾಗಿ ನೀಡಿದ ಆರ್ಥಿಕ ಸೌಲಭ್ಯ ವಸೂಲಾತಿಗೆ ಆದೇಶ ಹೊರಡಿಸಿರುವುದರಿಂದ ತಮ್ಮ ವಿರುದ್ಧದ ಆರೋಪಗಳಿಂದ ಮುಕ್ತಗೊಳಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ (7)ರ ನಿಯಂತ್ರಕರ ಪತ್ರ ದಿನಾಂಕ 28–6–2005ರಲ್ಲಿ ಶ್ರೀ ಎನ್. ವಿಶ್ವನಾಥ, ನಿರೀಕ್ಷಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಇವರ ವೇತನವನ್ನು ಮರು ನಿಗಧಿಪಡಿಸಿ ನೀಡಲಾದ ಹೆಚ್ಚುವರಿ ವೇತನವನ್ನು ಸರ್ಕಾರಕ್ಕೆ ಜಮೆ ಮಾಡಬೇಕೆಂದು ಶ್ರೀ ಎಸ್.ಆರ್. ಸಣ್ಣೂರ್‌ಕರ್‌ರವರು ಹೊರಡಿಸಿದ ಆದೇಶ ದಿನಾಂಕ 13–6–2003ರ ವಿರುದ್ಧ ಶ್ರೀ ಎನ್. ವಿಶ್ವನಾಥ್‌ರವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಗೆ ಅರ್ಜಿ ಸಂಖ್ಯೆ: 8856/2003ರಲ್ಲಿ ಪ್ರಕರಣ ದಾಖಲಿಸಿದ್ದು ತಡೆಯಾಜ್ಞೆ ತಂದಿರುತ್ತಾರೆ. ಹಾಗೂ ಪ್ರಕರಣ ಇತ್ಯರ್ಥವಾಗಿಲ್ಲವೆಂದು ತಿಳಿಸಿರುತ್ತಾರೆ.

ಸರ್ಕಾರವು ವಿಚಾರಣಾ ವರದಿ, ಸಂಬಂಧಿಸಿದ ದಾಖಲೆಗಳು, ಆರೋಪಿತ ಅಧಿಕಾರಿಯ ಹೇಳಿಕೆ ಹಾಗೂ ಪ್ರಕರಣ ಕೆ.ಎ.ಟಿ.ಯಲ್ಲಿ ಬಾಕಿ ಇರುವುದನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅನಾಸ 95 ಕಾಮಾಸೇ 2003, ಬೆಂಗಳೂರು, ದಿನಾಂಕ: 12ನೇ ಜನವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ 1957ರ ನಿಯಮ 8(ii)ರಲ್ಲಿ ಪ್ರದತ್ತವಾದ ಅಧಿಕಾರದ ಅನ್ವಯ ಶ್ರೀ ಪಿ.ವಿ. ಮನೋಹರನ್, ಉಪನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಇವರಿಗೆ ವಾಗ್ದಂಡನೆ ವಿಧಿಸಲಾಗಿದೆ ಹಾಗೂ ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ: 8856/2003 ಪ್ರಕರಣದಲ್ಲಿ ನ್ಯಾಯಮಂಡಳಿ ನೀಡುವ ಅಂತಿಮ ತೀರ್ಪಿಗೆ ಒಳಪಟ್ಟು ಈ ಆದೇಶವನ್ನು ಪುನರ್ ಪರಿಶೀಲಿಸುವ ಷರತ್ತಿಗೆ ಒಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.487

**ಕೆ. ಭವಾನಿ**

ಪೀಠಾಧಿಕಾರಿ (ಪ್ರ), ಆಹಾರ–1 ಶಾಖೆ, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ

## INFORMATION TECHNOLOGY, BIO TECHNOLOGY AND SCIENCE AND TECHNOLOGY SECRETARIAT

**Sub :** Setting up of Rural Business Process Outsourcing (BPO) units.

**Preamble:**

Karnataka State, during the last decade, has emerged as the front-runner in IT/BPO/ITEs sectors. Bangalore is the acknowledged leader in the global IT space. The city is well known for its software services, R & D, BPO and ITEs, which are the largest employment generating sectors. The BPO/ITEs sectors alone provide direct employment to over two lakh persons in Bangalore.

A BPO unit could be voice-based, data-based or a combination of both, and engaged in customer interaction, finance and accounting services, cal center and medical transcription, engineering and design data management, insurance and medical services, data management etc. Such services generally do not require highly professional knowledge. Persons with simple education and computer knowledge could be gainfully employed in such BPO units. Soft technical skills, communication skills and computer knowledge are sufficient for employment in the BPO sector.

Government intends to start Rural IT programmes for creating IT-based employment opportunities in Rural areas, primarily aimed at promoting and setting-up of BPO sergices in rural areas. A declaration to this effect has also been made in the State's budget for the financial year 2008-09.

A Rural BPO unit is distinct from a Common Service Centre (such as Nemmadi). A Common Service Centre offers Government to Citizen (G 2 C) services such as caste and income certificates, birth and death certificates, payment of bills of public utilities etc. A Rural BPO unit would be a revenue-based business model set-up by enterprising persons from the private sector. The role of Government is limited to that of a catalyst and facilitator/ enabler. There would be no Government to Citizen (G 2 C) services, but Business-to-Business (B 2 B) services would be offered by Rural BPO Units.

Government proposes to incentives setting-up of Rural BPO units in Taluka/ Hobli headquarters, having a population of less than one lakh. All the Taluka/ Hobli headquarters have the necessary IT infrasctructure, especially Broadband connectivity. Government financial support to promote setting-up of Rural BPO units would be limited to capital investment subsidy, manpower training subsidy and subsidy to meet the cost of building rentals and internet connectivity.

**Government Order No. ITD 39 MDA 2008, Bangalore, Dated 9th January 2009**

In the circumstances explained in the preamble, Government is pleased to announce incentivisation of Rural BPO units in Taluka/ Hobli headquarters having a population of less than one lakh. A Rural BPO unit providing direct employment to not less than 100 persons, shall be eligible for the following financial support from State Government:

**Non-recurring financial support:**

1. Capital investment subsidy upto Rs. 20 lakhs per 100 seater BPO unit,
2. Financial support of Rs. 10,000/- per employee towards manpower training.

**Recurring financial support:**

Financial support of Rs. 5,000/- per employee as subsidy to meet the cost of building rentals and Internet connectivity.

The financial support for Rural BPO units shall be met from the budgetary allocation, under the head of account "5465-01-190-1-14 Rural BPOs-059- Other expenditure" provided during the financial year 2008-09.

The Administrative Officer, Directorate of Information Technology and Bio Technology shall draw the said grant from the Treasury duly countersigned by the Director, Information Technology and Bio Technology and disburse the amount.

The Director, Information Technology and Bio Technology shall obtain the utilization certificates with the details of the expenditure having utilized the grants from the concerned BPOs and submit the same to Government within the financial year.

This order issues with the concurrence of Finance Department vide their Note No. FD 1645 Exp-1/08 dated 15th December 2008.

By order and in the name of the Governor of Karnataka,

PR. 485

**M.V. KRISHNAMURTHY**

Under Secretary to Government, Department of Information Technology,
Bio Technology and Science & Technology.

**ಆರ್ಥಿಕ ಸಚಿವಾಲಯ**

**ವಿಷಯ :** ಗುಲ್ಬರ್ಗಾ ಜಿಲ್ಲೆಯಲ್ಲಿ ಅಬಕಾರಿ ಅಧಿಕಾರಿ/ಸಿಬ್ಬಂದಿ ಕರ್ತವ್ಯಲೋಪದ ಬಗ್ಗೆ ಅಬಕಾರಿ ಉಪ ಆಯುಕ್ತರಾಗಿದ್ದ ಶ್ರೀ ತಿಪ್ಪಣ್ಣ ಬಿ. ಕೊಂಡಾಪೂರ ಮತ್ತು ಶ್ರೀ ಎ.ಎಸ್. ಮಂಗಾಣಿ, ಅಬಕಾರಿ ಅಧೀಕ್ಷಕರು, ಗುಲ್ಬರ್ಗಾ ಅಬಕಾರಿ ಜಂಟಿ ಆಯುಕ್ತರ ಕಛೇರಿ, ಗುಲ್ಬರ್ಗಾ ರವರುಗಳನ್ನು ಕರ್ತವ್ಯಲೋಪಕ್ಕಾಗಿ ಅಮಾನತ್ತುಗೊಳಿಸಲಾಗಿರುವ ಬಗ್ಗೆ.

**ಓದಲಾಗಿದೆ:** 1. ಅಬಕಾರಿ ಆಯುಕ್ತರ ಪತ್ರ ಸಂಖ್ಯೆ: ಇಸಿಇ 13 ಡಿಎಸ್‌ಸಿ(2) 2008, ದಿನಾಂಕ 4–10–2008.

2. ಅಬಕಾರಿ ಜಂಟಿ ಆಯುಕ್ತರು (ಜಾರಿ ಮತ್ತು ತನಿಖೆ), ಗುಲ್ಬರ್ಗಾ ವಿಭಾಗ ಇವರ ವರದಿ ಸಂಖ್ಯೆ: ಜೆಸಿಇ/ಆಡಳಿತ/08–09, ದಿನಾಂಕ 3–10–2008.

3. ಸರ್ಕಾರದ ಆದೇಶ ಸಂಖ್ಯೆ: ಆಇ 192 ಇಪಿಎಸ್ 2008, ದಿನಾಂಕ 10–10–2008.
4. ಶ್ರೀ ತಿಪ್ಪಣ್ಣ ಬಿ. ಕೊಂಡಾಪೂರ, ಅಬಕಾರಿ ಉಪ ಆಯುಕ್ತರು (ಅಮಾನತ್ತಿನಲ್ಲಿ) ರವರು ಸರ್ಕಾರಕ್ಕೆ ಸಲ್ಲಿಸಿರುವ ಮನವಿ ದಿನಾಂಕ 5–11–2008.
5. ಅಬಕಾರಿ ಆಯುಕ್ತರ ಪತ್ರ ಸಂಖ್ಯೆ: ಇಸಿಇ 13 ಡಿಎಸ್‌ಸಿ (2) 2008, ದಿನಾಂಕ 5–12–2008 ಮತ್ತು 20–12–2008.

**ಪ್ರಸ್ತಾವನೆ :**

ಮೇಲೆ ಓದಲಾದ (1) ಮತ್ತು (2)ರ ಉಲ್ಲೇಖಿತ ಪತ್ರಗಳಲ್ಲಿ ಗುಲ್ಬರ್ಗಾ ಜಿಲ್ಲೆಯ ಆಳಂದ, ಚಿಂಚೋಳಿ, ಅಫಜಲ್‌ಪುರ ಮತ್ತು ಯಾದಗಿರಿ ವಲಯ/ತಾಲ್ಲುಕುಗಳಲ್ಲಿ ಅಕ್ರಮ ಅಬಕಾರಿ ಚಟುವಟಿಕೆಗಳು ನಡೆಯುತ್ತಿರುವ ಬಗ್ಗೆ ಅಲ್ಲಿನ ಸ್ಥಳೀಯ ಅಬಕಾರಿ ಅಧಿಕಾರಿಗಳು/ಸಿಬ್ಬಂದಿ ವರ್ಗದವರು ಸೂಕ್ತ ಕ್ರಮ ಜರುಗಿಸದೇ ಕರ್ತವ್ಯ ನಿರ್ಲಕ್ಷ್ಯತೆ ಮತ್ತು ಕರ್ತವ್ಯಲೋಪವೆಸಗಿರುವ ಬಗ್ಗೆ ಅಂದಿನ ಗುಲ್ಬರ್ಗಾ ಜಿಲ್ಲೆಯ ಅಬಕಾರಿ ಉಪ ಆಯುಕ್ತರಾಗಿ 2005 ರಿಂದ ಆಗಸ್ಟ್ 2008ರ ವರೆಗೆ ಕಾರ್ಯ ನಿರ್ವಹಿಸಿದ್ದ ಶ್ರೀ ತಿಪ್ಪಣ್ಣ ಬಿ. ಕೊಂಡಾಪೂರ, ಅಬಕಾರಿ ಉಪ ಆಯುಕ್ತರವರನ್ನು ಉಲ್ಲೇಖ (3)ರಲ್ಲಿರುವ ಆದೇಶಾನುಸಾರ ಆಮಾನತ್ತುಗೊಳಿಸಲಾಗಿತ್ತು.

ಸದರಿ ಅಧಿಕಾರಿಯವರು ಸರ್ಕಾರಕ್ಕೆ ಸಲ್ಲಿಸಿರುವ ಉಲ್ಲೇಖ (4)ರಲ್ಲಿರುವ ದಿನಾಂಕ 5–11–2008ರ ಮನವಿಯಲ್ಲಿ ಉದ್ದೇಶಿತ ಶಿಸ್ತು ಕ್ರಮವನ್ನು ಕೈಬಿಡಲು ಹಾಗೂ ಪುನರ್ ನೇಮಕಗೊಳಿಸಲು ಸರ್ಕಾರವನ್ನು ಕೋರಿರುತ್ತಾರೆ.

ವಿಷಯವನ್ನು ಪರಿಶೀಲಿಸಿ, ಶ್ರೀ ತಿಪ್ಪಣ್ಣ ಬಿ. ಕೊಂಡಾಪೂರ, ಅಬಕಾರಿ ಉಪ ಆಯುಕ್ತರು ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಸದರಿಯವರ ಅಮಾನತ್ತನ್ನು ತೆರವುಗೊಳಿಸಿ, ಸರ್ಕಾರದ ಸೇವೆಗೆ ಪುನರ್ ನೇಮಕ ಮಾಡಲು ಸರ್ಕಾರವು ನಿರ್ಧರಿಸಿರುತ್ತದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಇ 192 ಇಪಿಎಸ್ 2008, ಬೆಂಗಳೂರು, ದಿನಾಂಕ: 17ನೇ ಜನವರಿ 2009.**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳ ಹಿನ್ನೆಲೆಯಲ್ಲಿ ಶ್ರೀ ತಿಪ್ಪಣ್ಣ ಬಿ. ಕೊಂಡಾಪೂರ, ಅಬಕಾರಿ ಉಪ ಆಯುಕ್ತರು ಹಾಗೂ ಅಂದಿನ ಗುಲ್ಬರ್ಗಾ ಜಿಲ್ಲೆಯ ಅಬಕಾರಿ ಉಪ ಆಯುಕ್ತರು ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಸದರಿಯವರ ಅಮಾನತ್ತನ್ನು ತೆರವುಗೊಳಿಸಿ ಇವರನ್ನು ಸರ್ಕಾರದ ಸೇವೆಗೆ ಪುನರ್ ನೇಮಕಗೊಳಿಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.477

**ಬಿ.ಎನ್. ಜಗದೀಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಅಬಕಾರಿ)

## ವಸತಿ ಸಚಿವಾಲಯ

**ವಿಷಯ :** ಬೆಳಗಾವಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂ. ವಇ/42/ಹೆಚ್‌ಎಎಂ/1999, ದಿನಾಂಕ 10–5–2000.

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಆದೇಶದನ್ವಯ, ವಿಧಾನಸಭಾ ಕ್ಷೇತ್ರವಾರು ಪುನರ್‌ರಚಿಸಲು ತೀರ್ಮಾನಿಸಿದ್ದು, ಅದರಂತೆ ಬೆಳಗಾವಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 49 ಹೆಚ್‌ಎಎಸ್ 2008, ಬೆಂಗಳೂರು, ದಿನಾಂಕ: 7ನೇ ಜನವರಿ 2009.**

ಬೆಳಗಾವಿ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1. | ಶ್ರೀ ದೀಪಕ್, ಅವರಶೇಖರ, ಭಾಗ್ಯನಗರ, ಬೆಳಗಾವಿ | ಸಾಮಾನ್ಯ |
| 2. | ಶ್ರೀ ಸದೇಪ್ಪ ರಾಜಕಟ್ಟಿ ಸಾ॥ ಮುಜಗಾವ, ಬೆಳಗಾವಿ ತಾ॥ & ಜಿಲ್ಲೆ | ಪರಿಶಿಷ್ಟ ಪಂಗಡ |
| 3. | ಶ್ರೀಮತಿ ಮಾಧವಿ ಲಕ್ಷ್ಮಣ ಕೋಲೇಕರ, ಮಹದ್ವಾರ ರಸ್ತೆ, ಬೆಳಗಾವಿ | ಹಿಂ, ವರ್ಗ (ಮಹಿಳೆ) |
| 4. | ಶ್ರೀ ಅನಂತರಾಜ ಬಾಹುಬಲಿ ಸೂಜಿ, 97/ಎ ಮುಖ್ಯ ರಸ್ತೆ, ಹಿಂದವಾಡಿ, ಬೆಳಗಾವಿ | ಅಲ್ಪಸಂಖ್ಯಾತರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.478

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ**

**ವಿಷಯ:** 2008–09ನೇ ಸಾಲಿನ ಆಯವ್ಯಯದಲ್ಲಿ ಅಪೆಂಡಿಕ್ಸ್–ಇ ನಲ್ಲಿ ಮೈಸೂರು ನಗರದ ಪರಿಮಿತಿಯಲ್ಲಿ ಬೆಂಗಳೂರು–ನೀಲಗಿರಿ ರಸ್ತೆಯ ಸರಪಳಿ 139.30ನೇ ಕಿಮಿ.ನಲ್ಲಿ ಸೇತುವೆ ಪುನರ್ ನಿರ್ಮಾಣ ಕಾಮಗಾರಿಯ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಇವರ ಪತ್ರ ಸಂಖ್ಯೆ:ಸಂಕದ: ಸೇಮೈ:ಮೈನ:ಬೆನಿ:139.30:2008–09 ದಿನಾಂಕ 19.12.2008.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ಮೈಸೂರು ನಗರದ ಪರಿಮಿತಿಯಲ್ಲಿ ಬೆಂಗಳೂರು–ನೀಲಗಿರಿ ರಸ್ತೆಯ ಸರಪಳಿ 139.30ನೇ ಕಿಮಿ.ನಲ್ಲಿ ಸೇತುವೆ ಪುನರ್ ನಿರ್ಮಾಣಕ್ಕೆ ಸಂಬಂಧಿಸಿದಂತೆ ರೂ.75.00ಲಕ್ಷಗಳ ಈ ಕೆಳಕಂಡ ಕಾಮಗಾರಿಯ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|
| 1 | ಮೈಸೂರು ನಗರದ ಪರಿಮಿತಿಯಲ್ಲಿ ಬೆಂಗಳೂರು –ನೀಲಗಿರಿ ರಸ್ತೆಯ ಸರಪಳಿ 139.30ನೇ ಕಿಮಿ.ನಲ್ಲಿ ಸೇತುವೆ ಪುನರ್ ನಿರ್ಮಾಣ ಕಾಮಗಾರಿ. | 75.00 |

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 75 ಸಿಬಿಆರ್ 2008, ಬೆಂಗಳೂರು, ದಿನಾಂಕ: 23ನೇ ಡಿಸೆಂಬರ್ 2008.**

ಮೈಸೂರು ನಗರ ಪರಿಮಿತಿಯಲ್ಲಿ ಬೆಂಗಳೂರು–ನೀಲಗಿರಿ ರಸ್ತೆಯ ಸರಪಳಿ 139.30ನೇ ಕಿಮಿ.ನಲ್ಲಿ ಸೇತುವೆ ಪುನರ್ ನಿರ್ಮಾಣದ ಈ ಕೆಳಕಂಡ ಕಾಮಗಾರಿಯ ಅಂದಾಜು ಪಟ್ಟಿಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

| ಕ್ರಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|
| 1 | ಮೈಸೂರು ನಗರದ ಪರಿಮಿತಿಯಲ್ಲಿ ಬೆಂಗಳೂರು –ನೀಲಗಿರಿ ರಸ್ತೆಯ ಸರಪಳಿ 139.30ನೇ ಕಿಮಿ.ನಲ್ಲಿ ಸೇತುವೆ ಪುನರ್ ನಿರ್ಮಾಣ ಕಾಮಗಾರಿ. | 75.00 |

ಈ ಆಡಳಿತಾತ್ಮಕ ಅನುಮೋದನೆಯು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ.

1. ಮೇಲ್ಕಂಡ ಕಾಮಗಾರಿಗಳನ್ನು ಕರ್ನಾಟಕ ಪಾರದರ್ಶಕತೆ ಅಧಿನಿಯಮ ಮತ್ತು ಕರ್ನಾಟಕ ಪಾರದರ್ಶಕತೆ ನಿಯಮಗಳ ಉಪಬಂಧಗಳ ಪ್ರಕಾರವೇ ಕೈಗೊಳ್ಳತಕ್ಕದ್ದು.
2. ಕಾಮಗಾರಿಗಳನ್ನು ಕೂಡಲೇ ಕೈಗೆತ್ತಿಕೊಂಡು ತ್ವರಿತವಾಗಿ ಪೂರ್ಣಗೊಳಿಸತಕ್ಕದು.
3. ಕಾಮಗಾರಿಗಳ ವೆಚ್ಚವು ಯಾವುದೇ ಕಾರಣಕ್ಕಾಗಿ ಅನುಮೋದಿತ ಅಂದಾಜು ಮೊತ್ತವನ್ನು ಮೀರತಕ್ಕದ್ದಲ್ಲ.
4. ಈ ಕಾಮಗಾರಿಗಳ ವೆಚ್ಚವನ್ನು ಲೆಕ್ಕಶೀರ್ಷಿಕೆ 5054 ರಸ್ತೆ ಮತ್ತು ಸೇತುವೆಗಳು ಅಡಿಯಲ್ಲಿ ಈ ಉದ್ದೇಶಕ್ಕಾಗಿ ಒದಗಿಸಲಾಗಿರುವ ಅನುದಾನದಲ್ಲಿ ಭರಿಸತಕ್ಕದ್ದು.
5. ಕಾರ್ಯನಿರ್ವಾಹಕ ಇಂಜಿನಿಯರ್ ಮತ್ತು ಅಧೀಕ್ಷಕ ಇಂಜಿನಿಯರ್ ಈ ಕಾಮಗಾರಿಗಳನ್ನು ಖುದ್ದಾಗಿ ಪರಿವೀಕ್ಷಿಸಿ ನಿರ್ಧಿಷ್ಟಪಡಿಸಿದ ಅವಧಿಯೊಳಗೆ ಪೂರ್ಣಗೊಳಿಸಲು ಎಲ್ಲಾ ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್.ರೇವಣ್ಣ**

ಪಿ.ಆರ್. 215

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

**ವಿಷಯ:** ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕಿನ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ದಕ್ಷಿಣ), ಬೆಂಗಳೂರು, ಇವರ ಪತ್ರಸಂಖ್ಯೆ: ಮುಇಂ/ಸಂಕದ/ರಶಾ/ಸಇ3/2008–09, ದಿನಾಂಕ: 3–10–2008.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ದಕ್ಷಿಣ), ಬೆಂಗಳೂರು ಇವರು ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕಿನ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ ನಿಗದಿತ ನಮೂನೆಯಲ್ಲಿ ಅಗತ್ಯ ನಕ್ಷೆಯೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರ ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀ ಗಳಲ್ಲಿ |
|---|---|---|
| 1. | ಸಾಗರ–ತುಂಬೆ–ಗುಬ್ಬಗೋಡು–ಬೆಳ್ಳೆಣ್ಣೆ–ತಾಳಗುಪ್ಪ ರಸ್ತೆ | 30.20 |
| 2. | ಖಂಡಿಕಾ–ಸಾಸರವಳ್ಳಿ–ಆಲಳ್ಳಿ ರಸ್ತೆ | 15.50 |
| 3. | ತಾಳಗುಪ್ಪ–ಸೈದೂರು–ಹಿರೇನೆಲ್ಲೂರು ರಸ್ತೆ | 13.00 |
| 4. | ವಳಗೆರೆ–ಮಾರಲಗೋಡು–ಹೆರಟೆ–ಹಾರಿಗೆ ರಸ್ತೆ | 14.30 |
| 5. | ಬಿಳಿಗಾರು–ಕಾನೂರು–ಕಾನೂರುಕೋಟೆ ರಸ್ತೆ | 14.30 |
| 6. | ಶೆಡ್ತಿಕೆರೆ–ವರದಾಮೂಲಾ–ಇಕ್ಕೇರಿ–ಹುಣಾಲುಮಡಿಕೆ ರಸ್ತೆ | 20.00 |
| 7. | ಸಾಗರ–ಬೇಳೂರು–ಬೆಳೆಯೂರು ರಸ್ತೆ | 12.00 |
| 8. | ಕೊರ್ಲಿಕೊಪ್ಪ–ಕುಂದೂರು–ಮುಡುಬಸಿದ್ದಾಪುರ ರಸ್ತೆ | 12.00 |
| 9. | ಉಳ್ಳೂರು–ಬಾಳೆಗೂಂಡಿ–ನೀಚಡಿ–ಹೊಸಂತೆ–ಕೋಟೆಕೊಪ್ಪ–ಗೌತಮಪುರ ರಸ್ತೆ | 19.50 |
| 10. | ಆನಂದಪುರ(ಎನ್.ಹೆಚ್–206)–ಆಡೂರು–ಮಾದರಸನಕೊಪ್ಪ–ಹೆಬ್ಬೈಲು ರಸ್ತೆ | 12.00 |
| 11. | ಯಡಜಿಗಳೆಮನೆ–ವರದಳ್ಳಿ–ಬೇದೂರು ರಸ್ತೆ | 7.80 |
|  | **ಒಟ್ಟು** | **170.60** |

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ದಕ್ಷಿಣ), ಬೆಂಗಳೂರು, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 557 ಸಿಆರ್ಎಂ 2008, ಬೆಂಗಳೂರು, ದಿನಾಂಕ: 17ನೇ ಅಕ್ಟೋಬರ್ 2008**

ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕಿನ ಒಟ್ಟು 170.60 ಕಿ.ಮೀ ಉದ್ದದ ಈ ಕೆಳಕಂಡ 11 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| ಕ್ರ ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀ ಗಳಲ್ಲಿ |
|---|---|---|
| 1. | ಸಾಗರ–ತುಂಬೆ–ಗುಬ್ಬಗೋಡು–ಬೆಳ್ಳೆಣ್ಣೆ–ತಾಳಗುಪ್ಪ ರಸ್ತೆ | 30.20 |
| 2. | ಖಂಡಿಕಾ–ಸಾಸರವಳ್ಳಿ–ಆಲಳ್ಳಿ ರಸ್ತೆ | 15.50 |
| 3. | ತಾಳಗುಪ್ಪ–ಸೈದೂರು–ಹಿರೇನೆಲ್ಲೂರು ರಸ್ತೆ | 13.00 |
| 4. | ವಳಗೆರೆ–ಮಾರಲಗೋಡು–ಹೆರಟೆ–ಹಾರಿಗೆ ರಸ್ತೆ | 14.30 |
| 5. | ಬಿಳಿಗಾರು–ಕಾನೂರು–ಕಾನೂರುಕೋಟೆ ರಸ್ತೆ | 14.30 |
| 6. | ಶೆಡ್ತಿಕೆರೆ–ವರದಾಮೂಲಾ–ಇಕ್ಕೇರಿ–ಹುಣಾಲುಮಡಿಕೆ ರಸ್ತೆ | 20.00 |
| 7. | ಸಾಗರ–ಬೇಳೂರು–ಬೆಳೆಯೂರು ರಸ್ತೆ | 12.00 |
| 8. | ಕೊರ್ಲಿಕೊಪ್ಪ–ಕುಂದೂರು–ಮುಡುಬಸಿದ್ದಾಪುರ ರಸ್ತೆ | 12.00 |
| 9. | ಉಳ್ಳೂರು–ಬಾಳೆಗೂಂಡಿ–ನೀಚಡಿ–ಹೊಸಂತೆ–ಕೋಟೆಕೊಪ್ಪ–ಗೌತಮಪುರ ರಸ್ತೆ | 19.50 |
| 10. | ಆನಂದಪುರ(ಎನ್.ಹೆಚ್–206)–ಆಡೂರು–ಮಾದರಸನಕೊಪ್ಪ–ಹೆಬ್ಬೈಲು ರಸ್ತೆ | 12.00 |
| 11. | ಯಡಜಿಗಳೆಮನೆ–ವರದಳ್ಳಿ–ಬೇದೂರು ರಸ್ತೆ | 7.80 |
|  | **ಒಟ್ಟು** | **170.60** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ರೇವಣ್ಣ**

ಪಿ.ಆರ್. 1460

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ(ಸಂಪರ್ಕ)

**ವಿಷಯ:** ಬೆಂಗಳೂರು ಉತ್ತರ ತಾಲ್ಲೂಕಿನ ವ್ಯಾಪ್ತಿಯ ಲೋಕೋಪಯೋಗಿ ಇಲಾಖೆಯ ರಾಜ್ಯ ಹೆದ್ದಾರಿ ಮತ್ತು ಜಿಲ್ಲಾ ಮುಖ್ಯ ರಸ್ತೆಗಳನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯವರಿಗೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ದಕ್ಷಿಣ), ಬೆಂಗಳೂರು, ಇವರ ಪತ್ರಸಂಖ್ಯೆ: ಮುಇಂ/ಸಂಕದ/ಮೇಘ/ಕಿಇಂ/ರಸ್ತೆ ಹಸ್ತಾಂತರ/2008–09, ದಿನಾಂಕ: 16–12–2008.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ದಕ್ಷಿಣ), ಬೆಂಗಳೂರು, ಬೆಂಗಳೂರು ಉತ್ತರ ತಾಲ್ಲೂಕಿನ ವ್ಯಾಪ್ತಿಯ ಲೋಕೋಪಯೋಗಿ ಇಲಾಖೆಯ ಈ ಕೆಳಕಂಡ 4(ನಾಲ್ಕು) ರಸ್ತೆಗಳನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯವರಿಗೆ ಹಸ್ತಾಂತರಿಸುವಂತೆ ಕೋರಿರುತ್ತಾರೆ.

| ಕ್ರ ಸಂ | ರಸ್ತೆಯ ವಿವರಗಳು | ಉದ್ದ (ಕಿ.ಮೀ) |
|---|---|---|
| 1. | ಬೆಂಗಳೂರು ನಂದಿ ರಸ್ತೆ ಸ.0.00ರಿಂದ 25.50 ಕಿ.ಮೀ(ರಾಜ್ಯ ಹೆದ್ದಾರಿ–104ಪ ರಸ್ತೆ ಸರಪಳಿ 0.00ರಿಂದ 11.00 ಕಿ.ಮೀ) | 11.00 |
| 2. | ಬೆಂಗಳೂರು ತುಮಕೂರು ರಸ್ತೆಯಿಂದ ದೊಡ್ಡಬೆಟ್ಟಹಳ್ಳಿ ಮಾರ್ಗವಾಗಿ ಯಲಹಂಕ ಸೇರುವುದು ಸ.0.00 ರಿಂದ 5.40 ಕಿ.ಮೀ(ಜಿಲ್ಲಾ ಮುಖ್ಯ ರಸ್ತೆ) | 5.40 |
| 3. | ಬೆಂಗಳೂರು ಉತ್ತರ ತಾಲ್ಲೂಕು ರಾಷ್ಟ್ರೀಯ ಹೆದ್ದಾರಿ–4 ರಸ್ತೆಯಿಂದ ನೆಲಗದರನಹಳ್ಳಿ ಅಂದ್ರಹಳ್ಳಿ ರಸ್ತೆ ಸ.0.00ರಿಂದ 9.00 ಕಿ.ಮೀ(ಜಿಲ್ಲಾ ಮುಖ್ಯ ರಸ್ತೆ) | 9.00 |
| 4. | ಬಿ.ಎಂ.ಹೆಚ್. ರಸ್ತೆಯಿಂದ ಉಲ್ಲಾಳು ಮಾರ್ಗವಾಗಿ ಜ್ಞಾನಭಾರತಿ ಸೇರುವ ರಸ್ತೆ ಸ.0.00ರಿಂದ 2.70 ಕಿ.ಮೀ(ಜಿಲ್ಲಾ ಮುಖ್ಯ ರಸ್ತೆ) | 2.70 |
| | **ಒಟ್ಟು** | **28.10** |

ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 660 ಸಿಆರ್ಎಂ 2008, ಬೆಂಗಳೂರು, ದಿನಾಂಕ: 7ನೇ ಫೆಬ್ರವರಿ 2009**

ಬೆಂಗಳೂರು ಉತ್ತರ ತಾಲ್ಲೂಕಿನ ವ್ಯಾಪ್ತಿಯ ಈ ಕೆಳಕಂಡ 4(ನಾಲ್ಕು) ಲೋಕೋಪಯೋಗಿ ಇಲಾಖೆಯ ರಸ್ತೆಗಳನ್ನು ನಿಯಮಾನುಸಾರ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಹಸ್ತಾಂತರಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| ಕ್ರ ಸಂ | ರಸ್ತೆಯ ವಿವರಗಳು | ಉದ್ದ (ಕಿ.ಮೀ) |
|---|---|---|
| 1. | ಬೆಂಗಳೂರು ನಂದಿ ರಸ್ತೆ ಸ.0.00ರಿಂದ 25.50 ಕಿ.ಮೀ(ರಾಜ್ಯ ಹೆದ್ದಾರಿ–104ಪ ರಸ್ತೆ ಸರಪಳಿ 0.00ರಿಂದ 11.00 ಕಿ.ಮೀ) | 11.00 |
| 2. | ಬೆಂಗಳೂರು ತುಮಕೂರು ರಸ್ತೆಯಿಂದ ದೊಡ್ಡಬೆಟ್ಟಹಳ್ಳಿ ಮಾರ್ಗವಾಗಿ ಯಲಹಂಕ ಸೇರುವುದು ಸ.0.00 ರಿಂದ 5.40 ಕಿ.ಮೀ(ಜಿಲ್ಲಾ ಮುಖ್ಯ ರಸ್ತೆ) | 5.40 |
| 3. | ಬೆಂಗಳೂರು ಉತ್ತರ ತಾಲ್ಲೂಕು ರಾಷ್ಟ್ರೀಯ ಹೆದ್ದಾರಿ–4 ರಸ್ತೆಯಿಂದ ನೆಲಗದರನಹಳ್ಳಿ ಅಂದ್ರಹಳ್ಳಿ ರಸ್ತೆ ಸ.0.00ರಿಂದ 9.00 ಕಿ.ಮೀ(ಜಿಲ್ಲಾ ಮುಖ್ಯ ರಸ್ತೆ) | 9.00 |
| 4. | ಬಿ.ಎಂ.ಹೆಚ್. ರಸ್ತೆಯಿಂದ ಉಲ್ಲಾಳು ಮಾರ್ಗವಾಗಿ ಜ್ಞಾನಭಾರತಿ ಸೇರುವ ರಸ್ತೆ ಸ.0.00ರಿಂದ 2.70 ಕಿ.ಮೀ(ಜಿಲ್ಲಾ ಮುಖ್ಯ ರಸ್ತೆ) | 2.70 |
| | **ಒಟ್ಟು** | **28.10** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ರೇವಣ್ಣ**

ಪಿ.ಆರ್. 574 ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ(ಸಂಪರ್ಕ)

**ವಿಷಯ:** ಚಾಮರಾಜನಗರ ತಾಲ್ಲೂಕು ಮುಕ್ಕಡಹಳ್ಳಿ ಗ್ರಾಮ ಪಂಚಾಯಿತಿಯ ವ್ಯಾಪ್ತಿಯಲ್ಲಿನ ಕೆರೆಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ.1ರಲ್ಲಿನ ಲೋಕೋಪಯೋಗಿ ಇಲಾಖೆಯ ವಶದಲ್ಲಿರುವ ಭೂಮಿಯನ್ನು ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ದಕ್ಷಿಣ), ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿಎಸ್/ಬಿಡಿಡಿ/ಎಇ–3/08–09, ದಿನಾಂಕ: 2–1–2009.

**ಪ್ರಸ್ತಾವನೆ:–**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ದಕ್ಷಿಣ), ಬೆಂಗಳೂರು ಇವರು ಚಾಮರಾಜನಗರ ತಾಲ್ಲೂಕಿನ ಕೆರೆಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ.1ರಲ್ಲಿನ 3.5 ಎಕರೆ ಜಮೀನನ್ನು ಬಹಳ ವರ್ಷಗಳ ಹಿಂದೆ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾಗಿದ್ದು, ಲೋಕೋಪಯೋಗಿ ಇಲಾಖೆಯ ಸ್ವಾಧೀನದಲ್ಲಿರುತ್ತದೆ. ಈ ಸದರಿ ಜಮೀನು ಕೆರೆಹಳ್ಳಿ ಗ್ರಾಮದ ಅಂಚಿನಲ್ಲಿದ್ದು, ಇದರಲ್ಲಿ ಹಲವಾರು ದಶಕಗಳ ಹಿಂದೆಯೇ ಗ್ರಾಮಸ್ಥರು ವಾಸದ ಮನೆಯನ್ನು ನಿರ್ಮಿಸಿಕೊಂಡು ವಾಸವಿದ್ದು, ಶೇಕಡ 60ರಷ್ಟು ಭೂಮಿಯನ್ನು ಆಕ್ರಮಿಸಿಕೊಂಡಿದ್ದು, ಸದರಿ ಭಾಗದಲ್ಲಿ ಅವಶ್ಯಕ ಮೂಲಭೂತ ಸೌಕರ್ಯಗಳನ್ನು ಸಹ ಒದಗಿಸಲಾಗಿದ್ದು, ಮನೆಗಳಿಗೆ ಮತ್ತು ಬೀದಿಗಳಿಗೆ ವಿದ್ಯುಚ್ಛಕ್ತಿ ಸರಬರಾಜನ್ನು ನೀಡಿ ಅದನ್ನು ಸಕ್ರಮಗೊಳಿಸಲಾಗಿದೆ.

1972ರಿಂದ ಸಣ್ಣ ನೀರಾವರಿ ಇಲಾಖೆ ಅಸ್ತಿತ್ವಕ್ಕೆ ಬಂದಿದ್ದು, ರಾಜ್ಯದಲ್ಲಿರುವ ಎಲ್ಲಾ ಸಣ್ಣ ನೀರಾವರಿ ಕೆರೆಗಳನ್ನು ಸದರಿ ಇಲಾಖೆಗೆ ಹಸ್ತಾಂತರಿಸಲಾಗಿದೆ. ತದನಂತರದಲ್ಲಿ, ದಿನಾಂಕ: 1–4–1987ರಿಂದ ಗ್ರಾಮೀಣಾಭಿವೃದ್ಧಿ ಇಲಾಖೆಯು ಅಸ್ತಿತ್ವಕ್ಕೆ ಬಂದಿದ್ದು, 100 ಎಕರೆಗಿಂತ ಕಡಿಮೆ ಅಚ್ಚುಕಟ್ಟು ಹೊಂದಿರುವ ಕೆರೆಗಳನ್ನು ಜಿಲ್ಲಾ ಪಂಚಾಯತ್‌ಗೆ ವಹಿಸಲಾಗಿದೆ. ಆದರೆ, ಕೆರೆಹಳ್ಳಿಯ ಸರ್ವೆ ನಂ.1ರಲ್ಲಿರುವ ಈ ಜಮೀನು ಜಿಲ್ಲಾ ಪಂಚಾಯತ್‌ಗೆ ಸಹ ವಿದ್ಯುಕ್ತವಾಗಿ ವರ್ಗಾವಣೆಯಾಗಿರುವುದಿಲ್ಲ. ಈ

